ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ ತರಿಸಿಕೊಂಡಲ್ಲಿ ೫ ಆಣೆ ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
JULY 1
1946

ಸಂಪಾದಕರು : ಹ. ರಾ. ಪುರೋಹಿತ, ಬಿ. ಎ. ] ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ [ Editor : H. R. Purohit, B. A.

ಸಂಪುಟ ೧೮ ] ಹುಬ್ಬಳ್ಳಿ ಸೋಮವಾರ ತಾರೀಖು ೧ — ೭ — ೧೯೪೬ [ ಸಂಚಿಕೆ ೧೫

# ಕಾಶ್ಮೀರದಲ್ಲಿ ಜವಾಹರರ "ಬಂಧನ" ವಾದಾಗ—

## ಸಮಸ್ತ ಭಾರತದಲ್ಲಿ ವಿದ್ಯುತ್ಸಂಚಾರ ಮಾಡಿದ ಘಟನೆಯ ವಿವರಗಳು : ಕಾಶ್ಮೀರ ಸರಕಾರದ ಅಸಭ್ಯ ವರ್ತನೆ

ನಡುಗಾಲ ಸರಕಾರದ ಯೋಜನೆಯನ್ನು ಪ್ರಮುಖ ರಾಜಕೀಯ ಪಕ್ಷಗಳು ಸ್ವೀಕರಿಸುವ ನಿರಾಕರಿಸುವ ಪ್ರಶ್ನೆ ಬಿಸಿಯಾರಿ ನೆನೆಗುದಿಗೆ ಬಿದ್ದು ವಾತಾವರಣದಲ್ಲಿ ಬೇಸರ ತುಂಬಿದಾಗ ಕಳೆದ ವಾರ ಕಾಶ್ಮೀರ ಸರಕಾರದ ಅವಿವೇಕದ ಪುಣ್ಯದಿಂದ ಸಮಸ್ತ ಹಿಂದುಸ್ತಾನದ ನಾಡಿಗಳಲ್ಲಿ ವಿದ್ಯುತ್ಸಂಚಾರವಾಯಿತು. ಅವರು ಪಂ. ಜವಾಹರಲಾಲರಿಗೆ ಸಂಸ್ಥಾನದಲ್ಲಿ ಪ್ರವೇಶವನ್ನು ನಿರಾಕರಿಸಿದರು, ಆ ಪ್ರತಿಬಂಧವನ್ನು ಮುರಿದಾಗ ಅವರನ್ನು "ಬಂಧಿಸಿದರು", ಮತ್ತು ಕಾಂಗ್ರೆಸ್ ಅಧ್ಯಕ್ಷರ ವಿನಂತಿಯ ಮೇರೆಗೆ ಶೇಖ ಅಬ್ದುಲ್ಲಾರ ವಿಚಾರಣೆಯನ್ನು ಜುಲೈ ೧ ಕ್ಕೆ ಮುಂದುವರಿಸಿ ಜವಾಹರಲಾಲರನ್ನು ಬಿಡುಗಡೆ ಮಾಡಿದರು.........

### ಅದು ಪ್ರಾರಂಭವಾದ ಬಗೆ

ಅನೇಕ ವಾರಗಳ ಹಿಂದೆ, ಫರೀದಕೋಟ ಸಂಸ್ಥಾನಕ್ಕೆ ‹‹ವಿದ್ಯುತ್ ಸಂದರ್ಶನ" ವಿತ್ತು ಅಲ್ಲಿನ ಸರಕಾರವನ್ನು ದಾರಿಗೆ ತಂದು ದಿಲ್ಲಿಗೆ ಮರಳಿದ ಜವಾಹರಲಾಲರು ಆಗ ಕಾಶ್ಮೀರದಲ್ಲಿ ಪ್ರಾರಂಭವಾಗಿದ್ದ ಕಲಮಲವನ್ನು ಕುರಿತು ಮಾತಾಡುತ್ತ ‹‹ಅವಶ್ಯ ಬಿದ್ದರೆ ಕಾಶ್ಮೀರಕ್ಕೂ ನಾನು ಹೋಗುವೆ›› ಎಂದು ಎಚ್ಚರಿಕೆ ಕೊಟ್ಟಿದ್ದರು. ಆ ನಡುವೆ ಮಂತ್ರಿತ್ರಯರ ಯೋಜನೆಯ ಸಂಬಂಧದಲ್ಲಿ ಮಗ್ನರಾಗಿದ್ದವರಿಗೆ ತಮ್ಮ ಈ ‹‹ವಾಗ್ದಾನ" -ಅಥವಾ ಬೆದರಿಕೆಯನ್ನು- ಕೃತಿಗಿಳಿಸುವ ಅವಕಾಶವಿದ್ದಿಲ್ಲ. ಆದರೆ ಕಾಶ್ಮೀರದಲ್ಲಿ ಸರಕಾರದವರು ನಡೆಸಿದ ಅತ್ಯಾಚಾರಗಳನ್ನು ಖಂಡಿಸಿ ಅವರು ಹೇಳಿಕೆಯನ್ನು ತೆಗೆದಿದ್ದರು. ಸಂಗಡಲೇ ಕಾಶ್ಮೀರದಲ್ಲಿ ಪ್ರಾರಂಭವಾಗಿದ್ದ ‹‹ಕಾಶ್ಮೀರದಿಂದ ಚಲೇಜಾವ್" ಚಳವಳಿ ಕಾಶ್ಮೀರ ರಾಷ್ಟ್ರೀಯ ಪರಿಷತ್ತಿನ ಅಥವಾ ಅ. ಭಾ. ಸಂಸ್ಥಾನಿ ಪ್ರಜಾಪರಿಷತ್ತಿನ ಅಧಿಕೃತ ಧೋರಣವಲ್ಲದ್ದರಿಂದ ಅದನ್ನು ವಿಶೇಷವಾಗಿ ತಲೆಗೆ ಹಚ್ಚಿಕೊಂಡು ದಬ್ಬಾಳಿಕೆ ನಡೆಸುವದೊಳಿತಲ್ಲವೆಂದು ಕಾಶ್ಮೀರದ ನರೇಂದ್ರರಿಗೆ ಸಲಹೆಯನ್ನೂ ಕೊಟ್ಟದ್ದರು. ಇದು ಆ ಚಳವಳಿಯ ಪುರಸ್ಕರ್ತರಿಗೂ ಒಂದು ಎಚ್ಚರಿಕೆಯಾಗಿತ್ತೆನ್ನಬಹುದು.

ಆದರೆ ಕಾಶ್ಮೀರ ನರೇಂದ್ರರಿಗೆ ಇಷ್ಟರಿಂದ ತೃಪ್ತಿಯಾಗಲಿಲ್ಲೇನೋ. ಅವರು ಕಾಶ್ಮೀರ ರಾಷ್ಟ್ರೀಯ ಪರಿಷತ್ತಿನ ಅಧ್ಯಕ್ಷರೂ ಅ. ಭಾ. ಸಂಸ್ಥಾನಿ ಪ್ರಜಾಪರಿಷತ್ತಿನ ಉಪಾಧ್ಯಕ್ಷರೂ ಆದ ಶೇಖ ಅಬ್ದುಲ್ಲಾರನ್ನೂ ಅವರ ಬೆಂಬಲಿಗರನ್ನೂ ಬಂಧಿಸಿದ್ದರು. ಅವರನ್ನು ವಿಚಾರಣೆಗೆ ಗುರಿಪಡಿಸುವ ನಿರ್ಧಾರಕ್ಕೂ ಬಂದಿದ್ದರು. ಇಷ್ಟು ವಿಲಂಬವಾದಮೇಲೆ ಫರೀದಕೋಟದ ತಮ್ಮ ಬಂಧುವಿನಂತೆ ಅಳ್ಳೆದೆಯನ್ನು ಪ್ರದರ್ಶಿಸಲು ಅವರ ಅಭಿಮಾನ ಒಪ್ಪಲಿಲ್ಲವೆಂದು ತೋರುತ್ತದೆ. ಸಾಲದ್ದಕ್ಕೆ ಹಿಂದೂ ಮಹಾಸಭೆಯ ಪ್ರತಿಗಾಮಿ ಧುರೀಣರ ರಾಜಕೀಯ ಬೆಂಬಲ ಬೇರೆ ಅವರಿಗೆ ದೊರತಿತ್ತು. ಆದರೂ ನೆಹರೂ ಅವರೂ ಅವರು ಕಾಶ್ಮೀರಕ್ಕೆ ಬರುವದೆಂದರೆ ಅವರ ಮನಸ್ಸು ಏಕೋ ಅಧೀರವಾಗಿತ್ತು. ಅದ್ದರಿಂದ ಅವರು, ನೆಹರೂ ಅವರು ಕೊಟ್ಟ ಹೇಳಿಕೆಯಲ್ಲಿ ಅನೇಕ ಅಸತ್ಯ ವಿಧಾನಗಳು ತುಂಬಿದ್ದವೆಂದೂ ಹೀಗೆ ಅವರು ಕಾಶ್ಮೀರ ಸರಕಾರದ ಬಗ್ಗೆ ಪೂರ್ವಗ್ರಹದೂಷಿತ ಹೇಳಿಕೆ ಹೊರಡಿಸಿದ್ದರಿಂದ ಅವರು ಕಾಶ್ಮೀರಕ್ಕೆ ಬಂದು ಯಾವ ಪ್ರಯೋಜನವೂ ಇಲ್ಲವೆಂದೂ ಸಾರಿದರು. ಮತ್ತು ಪುನಃ ವಿಚಾರಿಸಿದ ನಂತರ, ತಾವು ಮಾಡಿದ ಅಪಾದನೆಗಳಲ್ಲಿ ಕೆಲವಕ್ಕೆ ಸಾಕಷ್ಟು ಅಧಾರವಿದ್ದಿಲ್ಲೆಂದು ನೆಹರೂ ಅವರಿಗೆ ತಿಳಿದು ಬಂದು, ಅವರು ಆ ಬಗ್ಗೆ—ಮುಖ್ಯವಾಗಿ ಮಸೀದೆಯನ್ನು ನಾಶಮಾಡಿದರು, ಮತ್ತು ಚಳವಳಿಯಲ್ಲಿ ಸತ್ತವರನ್ನು ಒಟ್ಟಿ ಪೋಲೀಸರು ಪೆಟ್ರೋಲ ಹೊಯ್ದು ಸುಟ್ಟರು ಎಂಬೀ ಅಪಾದನೆಗಳ ಬಗ್ಗೆ—ವಿಷಾದ ಪ್ರದರ್ಶಿಸಿದರು. ಇದು ಕಾಶ್ಮೀರ ಸರಕಾರದ ತಲೆಗೆ ಎರಡು ಕೋಡು ಮೂಡಿಸಿರಬೇಕು. ಶೇಖ ಅಬ್ದುಲ್ಲಾರ ವಿಚಾರಣೆಯ ನಿರ್ಧಾರವನ್ನು ಅವರು ಮುಂದೆ ಸಾಗಿಸಿದರು.

ಇತ್ತ ಜವಾಹರಲಾಲರು ಕಾಶ್ಮೀರ ನರೇಂದ್ರರ ಈ ಅವಿನಯಕ್ಕೆ ಸೊಪ್ಪು ಹಾಕಿ ಸುಮ್ಮನಿರಲಿಲ್ಲ. ಶೇಖ ಅಬ್ದುಲ್ಲಾರ ಬಿಡುಗಡೆ ಅಥವಾ—ಕಡಿಮೆಯೆಂದರೆ ಅವರಿಗೆ ಸಮರ್ಥ ಆತ್ಮರಕ್ಷಣೆಯ ವ್ಯವಸ್ಥೆ—ಮಾಡಿಸಲು ಅವರು ಕಂಕಣಬದ್ಧರಾಗಿದ್ದರು. ಆದರೆ ಅವರು ಆರಂಭದಲ್ಲಿಯೇ ನೈಷ್ಠುರ್ಯ ತೋರಲಿಲ್ಲ. ಹೀಗೆ ಜೂನ ೧೫ ಕ್ಕೆ ಕಾಶ್ಮೀರ ಮಹಾರಾಜರಿಗೆ ಅವರು ಒಂದು ತಂತಿ ಕಳಿಸಿದ್ದನ್ನು ಕಾಣುತ್ತೇವೆ. ಅದರ ಸಾರ ಇಂತಿತ್ತು :

" ನಾನು ತಾ ೧೯ ಕ್ಕೆ ವಕೀಲರೊಡನೆ ಶ್ರೀನಗರಕ್ಕೆ ಮುಟ್ಟುವೆ. ಸಂಬಂಧಪಟ್ಟ ಎಲ್ಲರ ಹಿತದೃಷ್ಟಿಯಿಂದ ಶೇಖ ಅಬ್ದುಲ್ಲಾ ಮತ್ತು ಅವರ ಸಹಯೋಗಿಗಳ ವಿಚಾರಣೆಯನ್ನು ಬಿಟ್ಟುಕೊಟ್ಟು ಅವರನ್ನು ಬಿಡುಗಡೆ ಮಾಡಲಾಗುವದೆಂದೂ ಇನ್ನೂ ನನಗೆ ಆಶೆಯುಂಟು ಹಾಗೆ ಮಾಡಿದರೆ ಕಾಶ್ಮೀರವನ್ನೆದುರಿಸುತ್ತಿರುವ ಗಹನ ಸಮಸ್ಯೆಗಳ ಶಾಂತ ವಿವೇಚನೆಗೆ ಹಾದಿ ಸಿಗುವದು. ಇದರಲ್ಲಿ ನಾನು ಸಂತೋಷದಿಂದ ಸಹಾಯ ನೀಡುವೆ. ನಿಮಗೆ ಬೇಕೆನಿಸಿದರೆ ಭೆಟ್ಟಿಯಾಗಬಲ್ಲೆ."

ಆದರೆ ಕಾಶ್ಮೀರದ ರಾಜರಿಗೆ ಬೇಡವಾಗಿದ್ದು ಅದೇ ಆಗಿತ್ತು. ಅವರು ಗಾಬರಿಯಾಗಿ " ನೀವು ಇಲ್ಲಿಗೆ ಬರುವದು ಅಪೇಕ್ಷಣೀಯವಲ್ಲ. ಅದರಿಂದ ತೊಡಕುಗಳು ಹೆಚ್ಚಾಗುವದಿಷ್ಟೇ ಬಂದೀತು " ಎಂದು ಮಾರುತ್ತರವಿತ್ತರು.

ಇದರಿಂದ ಜವಾಹರರ ನಿರ್ಧಾರ ಇನ್ನಷ್ಟು ಗಟ್ಟಿಯಾಯಿತು. "ನನ್ನ ಆಗಮನದಿಂದ ತೊಡಕುಗಳು ಇನ್ನಷ್ಟು ಹೆಚ್ಚುವವೆಂದು ನೀವು ಭಾವಿಸಿದ್ದು ನನಗೆ ಆಶ್ಚರ್ಯವುಂಟುಮಾಡಿದೆ. ಈಗಾಗಲೆ ಬಹಳ ಕಾಲದಿಂದ ಇರುವ ತೊಡಕುಗಳನ್ನು ದೂರೀಕರಿಸುವದೇ ನನ್ನ ಉದ್ದೇಶ. ಅದ್ದರಿಂದ ನನ್ನ ಆಗಮನವನ್ನು ಸಂಸ್ಥಾನದ ಅಧಿಕಾರಿಗಳು ಸ್ವಾಗತಿಸಬೇಕಾಗಿತ್ತು. ಪ್ರತ್ಯೇಕತೆಯಿಂದಲೂ ತಪ್ಪಿಸಿಕೊಳ್ಳುವ ಪ್ರವೃತ್ತಿಯಿಂದಲೂ ಅನವಶ್ಯಕ ತೊಂದರೆಗಳುಂಟಾಗುವವು" ಎಂದು ಅವರು ಉತ್ತರವಿತ್ತು ಇನ್ನೊಂದು ದೊಡ್ಡ ಪತ್ರವನ್ನು ವಿಶೇಷ ದೂತನ ಮೂಲಕ ಕಳಿಸಿದರು. ಅದರಲ್ಲಿ ತಾ. ೧೯ಕ್ಕೆ ರಾವಳಪಿಂಡಿಯಿಂದ ಅಸಫ ಅಲ್ಲಿ, ದಿವಾಣ ಚಮನಲಾಲ ಮತ್ತು ಬಿಹಾರದ ಹಿಂದಿನ ಅಡ್ವೋಕೇಟ ಜನರಲ್ ಶ್ರೀ ಬಲದೇವ ಸಹಾಯರೊಡನೆ ಶ್ರೀನಗರಕ್ಕೆ ಮೋಟಾರಿನಲ್ಲಿ ಬಂದು ಮುಟ್ಟುವ ತಮ್ಮ ನಿರ್ಧಾರವನ್ನು ಬರೆದು ತಿಳಿಸಿದ್ದರಲ್ಲದೆ, ಶೇಖ ಅಬ್ದುಲ್ಲಾರ ವಿಚಾರಣೆಯನ್ನು ನಿಲ್ಲಿಸಿಬಿಟ್ಟು ಅವರನ್ನು ಬಿಡುಗಡೆ ಮಾಡುವದು ಕಾಶ್ಮೀರದ ಶಾಂತಿಯ ದೃಷ್ಟಿಯಿಂದ ಅವಶ್ಯವಾಗಿದೆಯೆಂದು ಸೂಚಿಸಿದ್ದರು. " ತಾ॥ ೨೧ ಕ್ಕೆ ಜರಗುವ ಶೇಖ ಅಬ್ದುಲ್ಲಾರ ವಿಚಾರಣೆಯಲ್ಲಿ ವಕೀಲಿ ರಕ್ಷಣೆ ಕೊಡಿಸುವದೇ ನನ್ನ ಮೊದಲ ಉದ್ದೇಶವಾಗಿದ್ದರೂ ಕಾಶ್ಮೀರದ ಸಾಮಾನ್ಯ ಪರಿಸ್ಥಿತಿಯ ಅಭ್ಯಸನವೇ ನನ್ನ ಮುಖ್ಯ ಗುರಿಯಾಗಿದೆ "ಯೆಂದು ಬರೆದು, ಸಂಸ್ಥಾನಗಳಿಂದ ಘಟನಾ ಸಮಿತಿಗೆ ಪ್ರತಿನಿಧಿಗಳಾಗಿ ಪ್ರಜೆಗಳ ಆಯ್ಕೆಯ ಜನರನ್ನೇ ಕಳಿಸಬೇಕೆಂದು ಸಂಸ್ಥಾನಿ ಪ್ರಜೆಗಳು ಬೇಡುತ್ತಿರುವ ಈ ಸಮಯದಲ್ಲಿ, ಈ ಇಕ್ಕಟ್ಟಿನ ಪ್ರಶ್ನೆಗಳನ್ನು ಬಿಡಿಸಬೇಕಾಗಿರುವಾಗ ಕಾಶ್ಮೀರದಲ್ಲಿ ಅಸಾಧಾರಣ ಪರಿಸ್ಥಿತಿಯಿದ್ದರೆ ತೊಂದರೆ ಇನ್ನಷ್ಟು ಹೆಚ್ಚುವದು ಎಂದು ಒಳ್ನುಡಿಯನ್ನೂ ಆಡಿದ್ದರು.

### ಕಾಶ್ಮೀರದ ‹‹ಮುತ್ತಿಗೆ"

ಆದರೆ ಈ ಎಲ್ಲ ಹಿತೋಪದೇಶ ಕಾಶ್ಮೀರ ನರೇಂದ್ರರಿಗೆ, ನಾಗವರ್ಮನ ಮಾತಿನಲ್ಲಿ ಹೇಳಬೇಕಾದರೆ, ‹‹ಪಿರಿದೆನಿಸುವ ಕರ್ಣಶೂಲೆಯಂ ಪುಟ್ಟಿಸಿ"ತು. ನೆಹರೂ ಅವರ ಆಗಮನದ ವಿಷಯಕ್ಕೆ ಅವರ ‹‹ಅಭಿಪ್ರಾಯ ಬದಲಾಯಿಸದೆ" ಉಳಿಯಿತು. ಅದರಿಂದ ‹‹ದುರದೃಷ್ಟದ ಪರಿಣಾಮಗಳು'' ಉಂಟಾಗಬಹುದೆಂದು ಅವರಿಗೆ ಭಯವಾಯಿತು. ‹‹ಅದನ್ನು ತಡೆಯುವದು ಸಂಬಂಧಪಟ್ಟ ಎಲ್ಲರ ಕರ್ತವ್ಯ'' ಎಂದು ಅವರು ನಿರ್ಧರಿಸಿದರು.

ನೆಹರೂ ಅವರು ನುಡಿಯಂತೆ ನಡೆದರು. ತಾ॥ ೧೯ ಕ್ಕೆ ಸುಮಾರು ಮಧ್ಯಾಹ್ನ ೨—೩೦ ಕ್ಕೆ ಅವರು ವಕೀಲರುಗಳೊಡನೆ ಕಾಶ್ಮೀರ—ಪಂಜಾಬ ಗಡಿಯಾದ ಕೋಹಲಾಕ್ಕೆ ಮುಟ್ಟಿದರು. ಅಲ್ಲಿ ಗಡಿಯ ಆಚೆಗೆ ಕಾಶ್ಮೀರದ ಜಿಲ್ಹಾ ಮ್ಯಾಜಿಸ್ಟ್ರೇಟರು ಪೋಲೀಸ, ಸೈನಿಕರೊಡನೆ ಸಿದ್ಧರಾಗಿದ್ದರು. ಕಾಶ್ಮೀರದ ಸೀಮಾಪ್ರದೇಶವನ್ನು ಈ ಅಪ್ರಿಯ ಅತಿಥಿಯ " ಮುತ್ತಿಗೆ '' ಯಿಂದ ರಕ್ಷಿಸಲು ರಸ್ತೆಯ ಮೇಲೆ ಮರದ ಪ್ರತಿಬಂಧಗಳನ್ನು ಒಡ್ಡಲಾಗಿತ್ತು. ನೆಹರೂ ಅವರು ಕೋಹಲಾ ಪೂಲನ್ನು ದಾಟಿದೊಡನೆ ಮ್ಯಾಜಿಸ್ಟ್ರೇಟರು ಅವರ ಮೋಟಾರನ್ನು ನಿಲ್ಲಿಸಿದರು. ಮ್ಯಾಜಿಸ್ಟ್ರೇಟ ಎಂ ಸಿ ದಾರರು—ಅವರು ನೆಹರೂ ಅವರ ಸಮೀಪದ ಬಂಧುವೆಂದು ಕಾಶ್ಮೀರ ಪ್ರಧಾನ ಪಂಡಿತ ರಾಮಚಂದ್ರ ಕಾಕರು ಹೇಳುತ್ತಾರೆ—ಅವರು ಕಾಶ್ಮೀರವನ್ನು ಪ್ರವೇಶಿಸಬಾರದೆಂಬ ಆಜ್ಞೆಯನ್ನು ಅವರ ಮೇಲೆ ಪ್ರಯೋಗಿಸಿದರು. " ನೆಹರೂ ಅವರನ್ನು ಹೊರತು ಉಳಿದವರನ್ನೆಲ್ಲ ಒಳಗೆ ಬಿಡುವ



ಆಜ್ಞೆ ನನಗುಂಟು '' ಎಂದರವರು. ಅವರ ಕೈ ನಡುಗುತಿತ್ತು, ದನಿ ಒಡೆದಿತ್ತು, ಎಂದು ಅ. ಪ್ರೆ. ದ ವಿಶೇಷ ಪ್ರತಿನಿಧಿ ಬರೆಯುತ್ತಾನೆ.

ಹಾರಿದವು ಸುದ್ದಿಗಳು ಹಿಂದುಸ್ಥಾನದಲ್ಲೆಲ್ಲ— ಕೆಲವು ನಿಜ, ಹಲವು ಕಲ್ಪಿತ ! ನೆಹರೂ ಅವರು ಆಜ್ಞೆಯನ್ನು ಧಿಕ್ಕರಿಸಿ ಮುನ್ನುಗ್ಗಿದಾಗ ಅವರಿಗೂ ಅವರ ಸಂಗಾತಿಗಳಿಗೂ ಸೈನಿಕರ ಬಂದೂಕಿನ ತಿವಿಗತ್ತಿಗಳ ಗಾಯವಾಯಿತು, ಕೋಹಲಾದಿಂದ ಜನರು ಜತ್ಥಾಗಳಾಗಿ ಬಂದು ನುಗ್ಗಿದರು, ಗಡಿನಾಡ ಮುಖ್ಯ ಮಂತ್ರಿಗಳಾದ ಡಾ. ಖಾನಸಾಹೇಬರು ೨೦೦ ಕೆಂಪಂಗಿ ಸ್ವಯಂಸೇವಕರೊಡನೆ ಬಂದು ಕೂಡಿಕೊಂಡರು, ಇತ್ಯಾದಿ, ಇತ್ಯಾದಿ. ಈ ಸುದ್ದಿಗಳನ್ನೆಲ್ಲ ಪಂ. ನೆಹರೂ ದಿಲ್ಲಿಗೆ ಮರಳಿದವರು ‹‹ಅತಿಶಯೋಕ್ತಿ''ಪೂರ್ಣವಾದವುಗಳೆಂದು ಸಾರಿ ಜನರ ಉದ್ವೇಗವನ್ನು ಕಡಿಮೆ ಮಾಡಿದರು. ಸೈನಿಕರಿಗೆ ಬಂದೂಕಿಗೆ ಮದ್ದು ತುಂಬಲು ಆಜ್ಞೆಯಾದುದೂ ನಿಜ, ಪೋಲೀಸರು ಲಾಠಿಯಿಂದ ಅವರನ್ನೆಲ್ಲ ತಡೆದದ್ದೂ ನಿಜ. ಅದಕ್ಕಿಂತ ಹೆಚ್ಚಿನ ಅಪಾಯವೇನೂ ಆಗಲಿಲ್ಲ.

ಆದರೆ ನೆಹರೂ ಅವರು ಆಜ್ಞೆಯನ್ನು ಉಲ್ಲಂಘಿಸಿ ಪಾದಚಾರಿಯಾಗಿ ಸಂಗಡಿಗರೊಡನೆ ಮುನ್ನುಗ್ಗಿದರು. "ನನ್ನ ಚಲನವಲನಗಳನ್ನು ನಿಯಂತ್ರಿಸುವ ಆಜ್ಞೆಗಳ ಬಗ್ಗೆ ನನಗೆ ಬಲವತ್ತರವಾದ ಆಕ್ಷೇಪವಿದೆ. ಸಂಸ್ಥಾನಗಳಲ್ಲಾಗಲಿ ಹಿಂದುಸ್ತಾನದ ಬೇರೆ ಕಡೆಗಳಲ್ಲಾಗಲಿ ನನಗೆ ಅಯೋಗ್ಯವೆಂದು ತೋರುವ ಆಜ್ಞೆಗಳನ್ನು ಪಾಲಿಸುವ ಇಚ್ಛೆಯೂ ನನಗಿಲ್ಲ. ಯಾವುದೇ ಸಂಸ್ಥಾನದಲ್ಲಿ ನಾನು ನನ್ನನ್ನು ಹೊರಗಿನವನೆಂದು ತಿಳಿದುಕೊಳ್ಳುವದಿಲ್ಲ. ಇಡಿ ಹಿಂದುಸ್ತಾನವೇ ನನ್ನ ಮನೆ. ಅದರಲ್ಲಿ ಎಲ್ಲಿ ಬೇಕಾದಲ್ಲಿ ಹೋಗುವ ಹಕ್ಕು ನನಗಿದೆ " ಎಂದು ದಿಲ್ಲಿಗೆ ಮರಳಿದ ನಂತರ ಅವರು ಹೇಳಿದರು. ಅದ್ದರಿಂದ " ಕಾಶ್ಮೀರ ಸಂಸ್ಥಾನದ ಅಧಿಕಾರಿಗಳಿಗೆ ತಾವು ವ್ಯವಹರಿಸುತಿರುವದು ಹಿಂದೀ ರಾಷ್ಟ್ರೀಯ ಕಾಂಗ್ರೆಸ್ಸಿನ ನಿಯೋಜಿತ ಅಧ್ಯಕ್ಷನೊಡನೆ ಎಂದು ಗೊತ್ತಿಲ್ಲವೆಂದು ತೋರುತ್ತದೆ. ನಾನು ಹಿಂದಿರುಗುವವನಲ್ಲ,'' ಎಂದು

( ೮ ನೇ ಪುಟ ನೋಡಿರಿ )

# ಕನ್ನಡದ ಕಲಾಜೀವಿ ವಾಳ್ವೇಕರ ಹನುಮಂತರಾಯ

ಲೇ— ಎನ್. ಎಸ್. ಗದಗಕರ, ಬಿ. ಎ.

ಅಂದು ಕರ್ನಾಟಕ ಕಾಲೇಜಿನ ಬಿ. ಎ. ತರಗತಿಯಲ್ಲಿ ಅಪೂರ್ವ ಜನಸಂದಣಿ. ವಾಳ್ವೇಕರರ ಹಾರ್ನೋನಿಯಮ್ ವಾದನದ ನಿಕಟ ಪರಿಚಯವಿದ್ದ ಕಾಲೇಜಿನ ಹಾಗೂ ಹೊರಗಿನ ಸದ್ಗೃಹಸ್ಥರಿಂದಲೂ ಅಧ್ಯಾಪಕವರ್ಗ, ರಸಿಕ ವಿದ್ಯಾರ್ಥಿ ವಿದ್ಯಾರ್ಥಿನಿಯರಿಂದಲೂ ಆ ಭವ್ಯವರ್ಗವು ಕಿಕ್ಕಿರಿದು ತುಂಬಿ ಎಷ್ಟೋ ಜನರು ಸ್ಥಳಸಿಗದೆ ನಿರಾಶರಾಗಿ ಹೊರಗೆ ಕೇಳುತ್ತ ನಿಂತಿದ್ದರು. ಎಲ್ಲರ ಲಕ್ಷವು ಮಿಡಿನಾಗರದಷ್ಟು ಚಪಲವಾದ ಬೆರಳುಗಳ ಸುಂದರ ನರ್ತನದಲ್ಲಿಯೆ. ತಾವು ಯಾರು ಎಲ್ಲಿದ್ದೇವೆ ಏನುಕೇಳುತ್ತಿದ್ದೇವೆ ಎಂಬುದರ ಎಚ್ಚರವಿಲ್ಲದಷ್ಟು ಮಂತ್ರಮುಗ್ಧರಾಗಿ ಗಂಡು ಹೆಣ್ಣುಗಳೆರಡೂ ಕೇಳುತ್ತಿದ್ದಾರೆ. ೧೯೪೪ನೇ ಡಿಸೆಂಬರದ ಅಂದಿನ ಸೊಬಗಿನ ಸಂಜೆಯು ಈ ಹಾರ್ನೋನಿಯಮ್ ವಾದನದ ವಾಳ್ವೇಕರರ ಕಾರ್ಯಕ್ರಮವು ಕೊನೆಗೊಂಡ ಮೇಲೆ, ಹೇಗಾದರೂ ಈ ಮಾಯಾವಿಯ ಬಗ್ಗೆ ಹಾಗೂ ಇವರ ಕಲೆಯ ಬಗ್ಗೆ ತಿಳಿಯಬೇಕೆಂಬ ತವಕವು ನನ್ನಲ್ಲಿ ಹೆಚ್ಚುತ್ತಲೇ ಇದ್ದಿತು. ಹೀಗೆ ಸಂದರ್ಶನ ಪಡೆಯುವ ಶುಭ ಪ್ರಸಂಗವು ಮೊನ್ನೆ ಮೊನ್ನೆ ನನ್ನ ಗೆಳೆಯ ಪಾಡಪ್ಪಿಯವರಿಂದ ಲಭಿಸಿತು. ದಕ್ಷಿಣ–ಉತ್ತರ ಹಿಂದುಸ್ತಾನಗಳೆರಡರಿಂದ ಅಭೂತಪೂರ್ವ ಮನ್ನಣೆ ಪಡೆದ ಶ್ರೀಯುತರು ತಮ್ಮ ನಚ್ಚಿನ ಕನ್ನಡ ವಾಣಿಯಲ್ಲಿ ಯೇ ಬೇಕಾದುದರ ಬಗ್ಗೆ ಸಂಕೋಚ ಪಟ್ಟುಕೊಳ್ಳದೆ ಕೇಳಿಕೊಳ್ಳಬೇಕೆಂದಾಗ, ನಿಜವಾಗಿಯೂ ಈ ಅಭಿಮಾನಿ ಕನ್ನಡಿಗನು ಹಿಂದುಸ್ತಾನಕ್ಕೆ ಭೂಷಣನೆಂದು ತಿಳಿದು ಕೂಲಂಕಷವಾದ ಪ್ರಶ್ನೆಗಳ ಸುರಿಮಳೆ ಪ್ರಾರಂಭಿಸಿದೆವು.

ಎಲ್ಲರಿಗೂ ಅಚ್ಚರಿಸುವ ಮೊಟ್ಟಮೊದಲಿನ ಮಾತೆಂದರೆ ವಾಳ್ವೇಕರರು ಧಾರವಾಡ ಜಿಲ್ಲೆಯ ಅಣ್ಣೀಗೇರಿಯಲ್ಲಿ ೧೯೧೧ನೇ ಜಾನೇವಾರಿ ೬ನೆ ದಿನಾಂಕದಲ್ಲಿ ಹುಟ್ಟಿದರು. ಅಲ್ಲಿಯ ಸಿರಿವಂತ ಮನೆತನಕ್ಕೆ ಸಂಬಂಧಿಸಿದವರು ವಾಳ್ವೇಕರ ಹನುಮಂತರಾಯರ ತಂದೆ. ಅಂತಹ ಕಲಾವಿದರಲ್ಲ. ಸ್ವತಃ ಇವರ ಅಣ್ಣಂದಿರಾದ ರಾವಸಾಹೇಬ ರಾಘವೇಂದ್ರರಾವ ಇನಾಮತಿಯವರಿಗಾಗಲಿ ಲಲಿತಕಲೆಯ ಮೋಹ ಕಡಿಮೆ. ವಾಳ್ವೇಕರರು ೭–೮ ವರ್ಷದವರಿದ್ದಾಗ ತಬಲಾ-ಬಾರಿಸುವ ಉತ್ಸುಕತೆಯಿಂದ ಲಿಪ್ಟನ್ ಚಹಾದ ಪುಡಿಯ ಡಬ್ಬಿಯ ತಗಡಿನಿಂದ ಸುಸ್ವರ ಹೊರಡಿಸುವ ಹುಡುಗಪ್ರಯತ್ನಮಾಡಿದಾಗ ತಂದೆ ಗೋವಿಂದರಾಯರು ತಮ್ಮ ಹುಡುಗನು ಹೀಗೇಯೇ ತಬಲಾ ಬಾರಿಸುತ್ತ ಬಾರಿಸುತ್ತ ನಾಟಕ ಕಂಪನಿಯವರ ಸಂಗಡ ಹೊರಡುವದು ನಿಶ್ಚಿತವೆಂದು ನಂಬಿ ಅವರ ಏಳ್ಗೆಯ ಬಗ್ಗೆ ನಿರಾಶರೇ ಆಗಿದ್ದರು. ಶಾಲೆಯಲ್ಲಿ ಕಲಿಯುವ ಕಡೆಗೆ ಅವರ ಲಕ್ಷವಿಲ್ಲದ್ದೂ ಇಂತಹ ಅವರ ತಿಳಿವಳಿಕೆಗೆ ಕಾರಣವಾಗಿರಬಹುದು.

ಉತ್ಸುಕತೆ, ತಾಳ್ಮೆ ಎಂಬವೆರಡು ಪ್ರಮುಖ ಗುಣಗಳು ವಾಳ್ವೇಕರರಿಗೆ ೭–೮ ವರ್ಷಗಳಿದ್ದಾಗಿನಿಂದ ಇಲ್ಲಿಯ ವರೆಗೆ ಹಾಗೂ ಮುಂದೆ ಅವರ ಕಲೆಯ ಬೆಳವಣಿಗೆಗೆ ಪ್ರಸಿದ್ಧಿಗೆ ಸಹಾಯಕಾರಿಯಾಗಿವೆ. ಅಣ್ಣಿಗೇರಿಯಲ್ಲಿಯೇ ಚಿಕ್ಕ ಚಿಕ್ಕ ಗೆಳೆಯರೊಡನೆ ಗಜಾನನೆ ಉತ್ಸವ ನಾಡಹಬ್ಬದ ಕಾರ್ಯಕಲಾಪವೇರ್ಪಡಿಸಿ ಮೇಳ ಹೊಂದಿಸಿ ಎಷ್ಟೋ ವರ್ಷ ನಡೆಸಿಕೊಂಡು ಬಂದರು. ಮುಂದೆ ಅಕಸ್ಮಾತ್ ೧೯೨೮ ನೇ ಇಸ್ವಿಯಲ್ಲಿ ಹಿರಿಯರೊಡನೆ ವಿಜಾಪುರಕ್ಕೆ ಹೋದಾಗ ಉಚ್ಚಶ್ರೇಣಿಯಲ್ಲಿದ್ದ ಸಂಗೀತಗಾರ ವಿಲಾಯತಖಾನರ ಕಚೇರಿ ನಡೆಯಿತು. ವಾಳ್ವೇಕರರೇ ಹಾರ್ನೋನಿಯಮ್ ನುಡಿಸಿದರು. ಬೆಚ್ಚಲಿಲ್ಲ, ಬೆವರಲಿಲ್ಲ. ಮೈಯ್ಯಲ್ಲಿ ಸ್ವಲ್ಪವೂ ನಡುಕವಿರಲಿಲ್ಲ. ಅಣ್ಣಿಗೇರಿಯಲ್ಲಿದ್ದಾಗಿನ ಹುಡುಗತನದ ಆತ್ಮವಿಶ್ವಾಸವೇ ಅಂದಿನ ಕಾರ್ಯದಲ್ಲಿ ಪ್ರಕಟವಾಗಿ ಖಾನರ ಮೆಚ್ಚುಗೆಗೆ ಪಾತ್ರವಾದ ಮೇಲೆ ೧೬ ವರ್ಷದ ವಾಳ್ವೇಕರರ ಬಗ್ಗೆ ಜನಸಾಮಾನ್ಯರಿಗೆ ಅಭಿಮಾನವೆನಿಸಿದುದರಲ್ಲಿ ಅಚ್ಚರಿಏನು? ಮುಂದೆ ಮಹಾರಾಷ್ಟ್ರದ ಕಲಾಕೇಂದ್ರವಾದ ಪುಣೆಯಲ್ಲಿ ಅಲ್ಲಾದಿಯಾಖಾನರ ಸಂಮ್ಮೋಹಕ ಸಂಗೀತದ ಪರಿಚಯವಾಯಿತು ಧಾರವಾಡದಲ್ಲಿ ಫಯಾಜಖಾನರಂತಹ ಸಂಗೀತ ವಿದ್ವಾಂಸರ ಮೇಳದಲ್ಲಿ ಹೆಚ್ಚಿನ ಹೆಸರು ಸಿಕ್ಕಿತು. ಫಯಾಜಖಾನರಲ್ಲಿಯೆ ವಾಳ್ವೇಕರರು ಮೊಟ್ಟಮೊದಲ ಅಧ್ಯಯನ ವಾಗಿದ್ದುದರಿಂದ ಅವರಲ್ಲಿ ಇವರ ಗೌರವ ಬಹಳ. ಕೊನೆಗೆ ಪರದೇಶಕ್ಕೆ ಮೈಸೂರ ಯುವರಾಜರು ಹೊರಟಾಗ ಔತಣ ಸಿಕ್ಕರೂ ಯಾವದೋ ಕಾರಣದಿಂದ ವಾಳ್ವೇಕರರು ಪರದೇಶಕ್ಕೆ ಹೋಗುವ ಮನಸ್ಸು ಮಾಡಲಿಲ್ಲ. ಆದರೆ ಹೈದರಾಬಾದ, ಸಾಂಗಲಿ, ಮೈಸೂರ, ಸೊಂಡೂರ ಮೊದಲಾದ ಸಂಸ್ಥಾನಗಳ ಮಹಾರಾಜರು ಎಷ್ಟೋ ಸಲ ಇವರನ್ನು ಕರೆಯಿಸಿ ಅಲೌಕಿಕ ಕಲೆಯ ಅಮೃತ ಉಂಡು ತಣಿದರು.

ಸಶಾಸ್ತ್ರ ಸಂಗೀತಕ್ಕೂ ಚಲಚ್ಚಿತ್ರಕ್ಕೂ ಅಜಗಜಾಂತರವೆಂದು ವಾಳ್ವೇಕರರ ಅಭಿಪ್ರಾಯ 'ಕರ್ನಾಟಕಿ ಸಂಗೀತವೆಂಬುದು ಮೈಸೂರಲ್ಲಿ ಇಲ್ಲವೆ ಇಲ್ಲ ಅದರ ಹೆಸರು ಹೇಳಿ ರಸಿಕರನ್ನು ರಂಜಿಸುವವರು ತೆಲಗು ತಮಿಳು ರಾಗಗಳನ್ನೇ ಹೇಳುತ್ತಿರುವರು. ನಿಜವಾದ ಸಂಗೀತದ ಉತ್ಪಾದಕರು ಪುರಂದರದಾಸರೇ ಎನ್ನುವರವರು. ಪುರಂದರದ್ದ ದಾಸರ ಬೇಲೂರ ಕೇಶವದಾಸರ ಕಿನ್ನರಿನಾದಕ್ಕೆ ಮೋಹಿತರಾದ ವಾಳ್ವೇಕರರು ಮೊನ್ನೆ ಮೊನ್ನೆ ಮೈಸೂರ ಹರಿಮಂದಿರದ ಉದ್ಘಾಟನೆಗೆ ಆಮಂತ್ರಿತರಾಗಿ ಹೋಗಿ ಅಲ್ಲಿ ತಮ್ಮ ವಾದನದ ಅಪ್ರತಿಮ ರಸದೂಟವನ್ನು ಭಕ್ತರಿಗೆ ಬಡಿಸಿದರು. ಹೀಗೆ ಸ್ವತಃ ತಾವು ಹಾರ್ನೋನಿಯಮ್ ವಾದನವನ್ನು ಜೀವಿತದ ಧ್ಯೇಯ, ಅದೊಂದು ಲಹರಿ, ಹುಚ್ಚು ಎಂದು ಮೈಮರೆಸುವಷ್ಟು ಬೆಳೆಯಿಸಿಕೊಂಡಿದ್ದರೂ ರಾಯರು ಧಾರವಾಡದ ನಾಡಹಬ್ಬ ಮೊದಲಾದ ಸಾರ್ವಜನಿಕ ಚಟುವಟಿಕೆಗಳಲ್ಲಿ ತಾದಾತ್ಮ್ಯ ತಳೆದಿರುವರು. ಕನ್ನಡದ ಸೇವೆಯೇ ತಮ್ಮ ಗುರಿಯೆಂದು ತಿಳಿದಿರುವರು.

ವಾಳ್ವೇಕರರು ಹಾರ್ನೋನಿಯಮ್ ನಡೆಸುವಲ್ಲಿ ಪ್ರಾವೀಣ್ಯ ದೊರಕಿಸಿದ್ದರೂ ಚಿತ್ರಕಲೆ, ಸಂಗೀತ ತಬಲಾ, ಸಿತಾರ ವಾದನಗಳಲ್ಲಿಯೂ ಪಳಗಿದ ಕೈ ಅಹುದು. ಹೀಗೆ ಕಲೆಗಳಲ್ಲಿ ಯಾರೂ ತಮ್ಮ ಕೈ ಹಿಡಿಯಲಾರರೆಂದು ಮನವರಿಕೆಯಾಗಿದ್ದರೂ ಮಾರೆತಾದರೂ ಯಾರಿಗೂ ಬಿರುಸು ಮಾತಾಡಿದ್ದಿಲ್ಲ ಹಾಗೆ ಮಹಾ ನಿಗರ್ವಿಯೂ ಅವರುಂಟು – ಬೇಕಾದಷ್ಟು ಸಲ ಚಹಾ, ಕೆಲವು ಕಟ್ಟು ಬೀಡಿ, ಒಂದು ಅಂದವಾದ ಸ್ವರಪೆಟ್ಟಿಗೆ ದೊರೆತರೆ ಊಟಬೇಡ ನಿದ್ರೆಬೇಡ ಎಂಬ ಓಮರಖಾಯಾಮ್‌ನ ಜಾತೀಯವರು ಆದರೆ ಎಷ್ಟೋ ಸಂಗೀತಗಾರರಂತೆ ಹೊಟ್ಟೆಯ ಪಾಡಿಗಾಗಿ ಕಲೆಯನ್ನು ಬೀದಿಗೆ ಮಾರಲಿಕ್ಕೆ ಹಚ್ಚುವ ಚಿಲ್ಲರೆ ಮನಸ್ಸು ವಾಳ್ವೇಕರರಿಗಿಲ್ಲ. ಹೀಗೆ ಕನ್ನಡ ನುಡಿಯ ನಾಡ ಪ್ರೇಮಿ ಹಿಂದುಸ್ತಾನದ ಲಲಿತಕಲೆಗೆ ತಿಲಕಪ್ರಾಯರಾದಂಥ ವಾಳ್ವೇಕರ ಹನುಮಂತರಾಯರಿಗೆ ದೇವರು ಆಯುರಾರೋಗ್ಯವನ್ನು ದಯಪಾಲಿಸಲಿ. ಹಾಗೂ ಭಾರತದ ಈ ಕೀರ್ತಿಯನ್ನು ಅನ್ಯದೇಶಗಳಿಗೆ ಮುಟ್ಟಿಸುವದಕ್ಕೆ ಅನುಕೂಲತೆ ಸ್ಫೂರ್ತಿಯನ್ನು ಹೆಚ್ಚಾಗಿ ಒದವಿಸಲಿ ಎಂದು ನಮ್ಮ ಹೃತ್ಪೂರ್ವಕ ಹಾರೈಕೆ.

## ದಕ್ಷಿಣ ಆಫ್ರಿಕೆ ಬಗ್ಗೆ ವರ್ಕಿಂಗ ಕಮಿಟಿ ಗೊತ್ತುವಳಿ

ಕಾಂಗ್ರೆಸ್ ವರ್ಕಿಂಗ ಕಮೀಟಿಯವರು ಜೂನ ೧೫, ೧೯೪೬ ಕ್ಕೆ ದಕ್ಷಿಣ ಅಫ್ರಿಕೆಯ ಸಂಬಂಧದಲ್ಲಿ ಪಾಸುಮಾಡಿದ ಗೊತ್ತುವಳಿಯಂತಿದೆ.

ದಕ್ಷಿಣ ಅಫ್ರಿಕಾ ಯೂನಿಯನ್ ಪಾರ್ಲಿಮೆಂಟನವರು ತಮ್ಮ ಮೇಲೆ ನಿರ್ಬಂಧ ಹೇರುವ ಗೊತ್ತುವಳಿಯನ್ನು ಪ್ರತಿಭಟಿಸುವುದಕ್ಕಾಗಿ ದಕ್ಷಿಣ ಅಫ್ರಿಕೆಯಲ್ಲಿಯ ಹಿಂದೀಯರು ಹೂಡಿದ ಸತ್ಯಾಗ್ರಹ ಚಳವಳಿಗಾಗಿ ಕಾಂಗ್ರೆಸವರ್ಕಿಂಗ ಕಮೀಟಿಗೆ ಸಮಾಧಾನವಾಗಿದ್ದರೂ ವಿವಂಚನೆಯುಂಟಾಗಿದೆ. ಭೌತಿಕ ಹಾನಿಯನ್ನು ಬದಿಗಿಟ್ಟು ಹಿಂದೀಯರ ಮರ್ಯಾದೆ ಪ್ರಶ್ನೆಯನ್ನೆ ಅನುಲಕ್ಷಿಸಿದರೆ ಈ ಚಳವಳಿಯಲ್ಲಿ ಯಶಸ್ಸಿನ ಬೀಜಗಳು ಇವೆಂದು ಕಾಂಗ್ರೆಸ್ ವರ್ಕಿಂಗ ಕಮೀಟಿಯ ಅಭಿಪ್ರಾಯವಿದೆ.

ಒಮ್ಮೆ ಹೋರಾಟವನ್ನು ಪ್ರಾರಂಭಿಸಿದ ಬಳಿಕ ಹಿಂದೆ ಸರಿಯದೆ ಕೊನೆಯ ವರೆಗೆ ಸತ್ಯಾಗ್ರಹಿಗಳು ಅದನ್ನು ನಡೆಸಿಕೊಂಡು ಹೋಗುವರೆಂದು ಕಮೀಟಿಯ ಅಪೇಕ್ಷೆ. ಈ ವೀರೋಚಿತ ಹೋರಾಟದಲ್ಲಿ ಕಮೀಟಿಯವರು ಸತ್ಯಾಗ್ರಹಿಗಳಿಗೆ ಸಂಪೂರ್ಣ ಸಹಾನುಭೂತಿಯನ್ನು ತೋರುವರಲ್ಲದೆ, ಸತ್ಯಾಗ್ರಹದಲ್ಲಿ ಸೇರಿದ್ದವರು ಆ ಕಾಯದೆಯಲ್ಲಿರುವ ಮರುಳು ಮಾತುಗಳಿಗೆ ಯೂನಿಯನ್ ಸರಕಾರದವರು ಕೊಡಬಹುದಾದ ಸಣ್ಣಪುಟ್ಟ ಸವಲತ್ತುಗಳಿಗೆ ಮೋಹಿಸಬಾರದೆಂದು ಕಮೀಟಿಯ ಆಸೆ. ಕಾಯದೆಯಲ್ಲಿ ಹಿಂದೀಯರಿಗೆ ಕೊಟ್ಟ ಕನಿಷ್ಠ ಸ್ಥಾನಮಾನಗಳನ್ನು ಹೋಗಲಾಡಿಸಬೇಕಾದರೆ ಅದನ್ನು ಸಂಪೂರ್ಣವಾಗಿ ರದ್ದುಪಡಿಸುವುದೆ ಉಪಾಯವು. ಹಿಂದುಸ್ತಾನ ಸರಕಾರವು ಬ್ರಿಟಿಶ ಆಡಳಿತೆಯಲ್ಲಿರುವ ವರೆಗೆ ವಾಯಿಸರಾಯ ಸಾಹೇಬರು ಆ ಶೂರ ಸತ್ಯಾಗ್ರಹಿಗಳ ಪರವಾಗಿ ತಮ್ಮ ವರ್ಚಸ್ಸನ್ನು ಸ್ಫುಟವಾಗಿ ಉಪಯೋಗಿಸಿ ಮಾನವೀಯ ಹಕ್ಕುಬಾಧ್ಯತೆಯ ಈ ಉಚ್ಚ ಹೋರಾಟದಲ್ಲಿ ಜಗತ್ತಿನ ಸಹಾನುಭೂತಿಯನ್ನು ಪಡೆಯಬೇಕೆಂದು ಕಮೀಟಿಯು ಆಶಿಸುತ್ತದೆ ಮತ್ತು ಅಪೇಕ್ಷಿಸುತ್ತದೆ.



# ಸಂಪಾದಕೀಯ * * * * * * * *
# ಟೀಕೆ-ಟಿಪ್ಪಣೆಗಳು

## ಶಕುನಿತಂತ್ರ ಸಾಧಿಸಲಿಲ್ಲ

ಬ್ರಿಟಿಶ್ ಮಂತ್ರಿತ್ರಯರು ಮತ್ತು ವಾಯಿಸರಾಯರು ಸೂಚಿಸಿದ ನಡುಗಾಲ ಸರಕಾರ ಯೋಜನೆಯ ಬಗೆಗೆ ಕಾಂಗ್ರೆಸ್ ಕಾರ್ಯಸಮಿತಿಯವರು ಒಂದು ವಾರದ ವರೆಗೆ ಕೂಲಂಕಷ ಚರ್ಚೆಮಾಡಿ ತ್ಯಾಜ್ಯವೆಂದು ಅದನ್ನು ಬಿಸುಟಬಿಟ್ಟುದು ಸಂತೋಷದ ಸಂಗತಿ. ಆ ಯೋಜನೆಯಲ್ಲಡಕವಾದ ವಿಷಮಿಶ್ರಿತ ಸಿಹಿಗುಳಿಗೆಗಳನ್ನು ನುಂಗಲು ಕಾಂಗ್ರೆಸ್ಸು ಒಪ್ಪಿದ್ದರೆ ಆತ್ಮನಾಶವನ್ನು ಮಾಡಿಕೊಂಡಂತಾಗುತಿತ್ತು. ಕಾಂಗ್ರೆಸ್ಸು ಇಡೀ ರಾಷ್ಟ್ರದ ಪ್ರತಿನಿಧಿಯು. ಜಾತಿಮತಗಳನ್ನೆಣಿಸದೆ ಕಳೆದ ಅರವತ್ತು ವರುಷಗಳಿಂದ ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತದೆ. ಇಂಥ ವಿಶುದ್ಧ ರಾಷ್ಟ್ರೀಯ ಸಂಸ್ಥೆಯಿಂದು ಕೇವಲ ಹಿಂದುಗಳ ಸಂಸ್ಥೆಯೆಂದು ಮುದ್ರೆಯೊತ್ತಿಸಿಕೊಳ್ಳಲು ಅದೆಂತು ಒಪ್ಪಬೇಕು? ನಡುಗಾಲ ಸರಕಾರದ ಯೋಜನೆಯಲ್ಲಿ ಕಾಂಗ್ರೆಸ್ಸಿನ ಪ್ರತಿನಿಧಿಗಳೆಂದರೆ ಕೇವಲ ಹಿಂದುಗಳೆ? ಉಳಿದ ಯಾವ ಜಾತಿಯವರನ್ನಾದರೂ ತಮಗೆ ಕೊಟ್ಟ ಸ್ಥಳಗಳಲ್ಲಿಯೆ ಕಳಿಸುವ ಹಕ್ಕು ಕಾಂಗ್ರೆಸ್ಸಿಗಿಲ್ಲ. ಎಂದಬಳಿಕ ಕಾಂಗ್ರೆಸ್ಸು ಇಡೀ ರಾಷ್ಟ್ರದ ಪ್ರತಿನಿಧಿಯೆಂದು ಅದೆಂತು ಹೇಳಿಕೊಳ್ಳಬಲ್ಲುದು? ಮಂತ್ರಿತ್ರಯರು ಮತ್ತು ವಾಯಿಸರಾಯರು ಕಾಂಗ್ರೆಸ್ಸು ಇಡೀ ರಾಷ್ಟ್ರದ ಪ್ರತಿನಿಧಿ ಎಂಬುದನ್ನೊಪ್ಪುತ್ತಾರೆ. ಆದರೆ ಆ ಪ್ರತಿನಿಧಿತ್ವದ ಹಕ್ಕನ್ನು ಈಗ ಉಪಯೋಗಿಸಬೇಡಿರೆಂದು ಉಪದೇಶಿಸುತ್ತಾರೆ, ಇಂಥ ಮಹತ್ವದ ಮತ್ತು ರಾಷ್ಟ್ರದ ಭವಿತವ್ಯ ನಿರ್ಣಾಯಕ ಸಮಯದಲ್ಲಿ ರಾಷ್ಟ್ರೀಯ ಸಂಸ್ಥೆಯು ತನ್ನ ರಾಷ್ಟ್ರಪ್ರತಿನಿಧಿತ್ವವನ್ನು ಕಳೆದುಕೊಂಡರೆ ಮುಂದೆ ಅದೆಂದೂ ದೊರಕದು. ಇದನ್ನು ಸೂಕ್ಷ್ಮರೀತಿಯಿಂದ ಅರಿತು ಕಾಂಗ್ರೆಸ್ ಕಾರ್ಯಸಮಿತಿಯು ಯೋಜನೆಯನ್ನು ತಿರಸ್ಕರಿಸಿದ್ದು ಅತ್ಯಂತ ಸಮಂಜಸವೂ ರಾಷ್ಟ್ರಹಿತಕಾರಕವೂ ಆಗಿದೆ. ತಮ್ಮ ಶಕುನಿತಂತ್ರವು ಸಾಧಿಸದಿದ್ದುದಕ್ಕೆ ಕ್ರಿಪ್ಸ ಪ್ರಭೃತಿಗಳಿಗೆ ವಿಷಾದವಾಗಿರಲು ಸಾಕು.

## ದೀರ್ಘಾವಧಿ ಯೋಜನೆ

ನಡುಗಾಲ ಸರಕಾರ ಯೋಜನೆಯು ದೋಷಪೂರ್ಣವೂ ಅರಾಷ್ಟ್ರೀಯವೂ ಆಗಿದ್ದರಿಂದ ಕಾಂಗ್ರೆಸ್ಸು ಅದನ್ನು ನಿರಾಕರಿಸಿದ್ದು ಉಚಿತವೇ ಎಂದು ಮೇಲೆ ಹೇಳಿದ್ದಾಗಿದೆ. ಇನ್ನು ಮಂತ್ರಿತ್ರಯರ ದೀರ್ಘಾವಧಿ ಯೋಜನೆಯೂ ಸದೋಷವಾಗಿದೆಂಬುದು ಸರ್ವಶ್ರುತ. ವಿಶೇಷತಃ ಪ್ರಾಂತಗಳ ಒತ್ತಾಯದ ಗುಂಪುಗಳ ಯೋಜನೆ ಮತ್ತು ವಯಸ್ಕ ಮತದಾನ ಪದ್ಧತಿಯಿಂದ ಸದಸ್ಯರನ್ನಾರಿಸದಿದ್ದುದು ಮಹತ್ವದ ದೋಷಗಳು. ಈ ಬಗೆಗೆ ಈ ಮೊದಲು ನಮ್ಮ ಅಭಿಪ್ರಾಯವನ್ನು ಬರೆದದ್ದಾಗಿದೆ. ಹೀಗೆ ಈ ಯೋಜನೆ ದೋಷಪೂರ್ಣವಾಗಿದ್ದರೂ ಕಾಂಗ್ರೆಸ್ಸು ಹಿಂದುಸ್ತಾನದ ಘಟನೆಯೊಂದನ್ನು ಸಿದ್ಧಪಡಿಸಿ ಬಿಡುವಾ ಎಂದು ಭಾವಿಸಿ ಈ ಯೋಜನೆಯನ್ನು ಸ್ವೀಕರಿಸಿರುವದು. ಬಿ. ಸಿ. ಗುಂಪುಗಳಲ್ಲಿರುವ ಕಾಂಗ್ರೆಸ್ಸಿಗರು ಶೀಖರು ಮತ್ತು ಹಿಂದೂಮಹಾಸಭೆಯವರು ಈ ಯೋಜನೆಯನ್ನು ವಿರೋಧಿಸುವುದುಂಟು. ಕಾಂಗ್ರೆಸ ವರ್ಕಿಂಗ ಕಮೀಟಿಗೆ ಇದು ಗೊತ್ತಿದೆ. ಆದರೂ ಇದನ್ನು ಸ್ವೀಕರಿಸಿ ಘಟನೆ ರಚಿಸುವಲ್ಲಿ ತಮ್ಮ ಸಹಕಾರವನ್ನು ನೀಡಿದ್ದಾರೆ. ಆದರೆ ಈ ಯೋಜನೆ ಯಶಸ್ವಿಯಾಗಬೇಕಾದರೆ ಕೇಂದ್ರದಲ್ಲಿ ರಾಷ್ಟ್ರೀಯ ಪ್ರಾತಿನಿಧಿಕ ಸರಕಾರವಿರುವುದವಶ್ಯವೆಂದು ಕಾಂಗ್ರೆಸ್ಸು ಸ್ಪಷ್ಟಪಡಿಸಿದೆ. ಮಂತ್ರಿತ್ರಯರು, ವಾಯಿಸರಾಯರು ಮುಸ್ಲಿಂಲೀಗವನ್ನು ಸಂತೈಸುವದಕ್ಕಾಗಿ ಪ್ರಾತಿನಿಧಿಕ ಸರಕಾರ ಸ್ಥಾಪಿಸುವ ಸುಸಂಧಿಯನ್ನು ಕಳೆದುಕೊಂಡರು. ಕಾಂಗ್ರೆಸ್ಸು ಮತ್ತು ಲೀಗಿಗೆ ಇಂತಿಷ್ಟು ಸ್ಥಳಗಳನ್ನು ಕೊಟ್ಟಿದ್ದೇವೆ ಆಯಾ ಪಕ್ಷದವರು ತಮಗೆ ಬೇಕಾದ ಪ್ರತಿನಿಧಿಗಳನ್ನು ಕಳಿಸಬಹುದು ಎಂದು ಕಟ್ಟುನಿಟ್ಟಾಗಿ ಹೇಳಿಬಿಟ್ಟಿದ್ದರೆ ಇಷ್ಟೊಂದು ಪ್ರತಿಕೂಲ ಪರಿಸ್ಥಿತಿಯುಂಟಾಗುತಿದ್ದಿಲ್ಲ. ಆದರೆ ಅವರ ಕುಟಿಲಕಾರಸ್ಥಾನದಿಂದ ನಡುಗಾಲ ಸರಕಾರ ಯೋಜನೆ ಅಯಶಸ್ವಿಯಾದ್ದರಿಂದ ಮುಂದಿನ ದೀರ್ಘಾವಧಿ ಯೋಜನೆಯೂ ಸಂಪೂರ್ಣ ಯಶಸ್ವಿಯೆಂತಾಗುವುದೊ ನೋಡಬೇಕಾಗಿದೆ.

ಈ ಯೋಜನೆಗೆ ಕಾಂಗ್ರೆಸ್ಸು ಮತ್ತು ಲೀಗ ಎರಡು ಪ್ರಮುಖ ಪಕ್ಷಗಳು ಒಪ್ಪಿದ್ದರಿಂದ ಸರಕಾರದವರು ಆ ಬಗೆಗೆ ಮುಂದಿನ ಮಾರ್ಗವನ್ನು ಅನುಸರಿಸುವರು.

## ಜೋಪಾಸನಾ ಸರಕಾರ

ಕಾಂಗ್ರೆಸ್ಸು ನಡುಗಾಲ ಸರಕಾರ ಯೋಜನೆಯನ್ನು ನಿರಾಕರಿಸಿದರೂ ಮುಸ್ಲಿಂಲೀಗಿನವರು ಅದನ್ನು ಸ್ವೀಕರಿಸುವುದಾಗಿ ನಿರ್ಧರಿಸಿ ಮುಸ್ಲಿಂ ರಾಜ್ಯಸ್ಥಾಪನೆಯ ತಮ್ಮ ಮಹತ್ವಾಕಾಂಕ್ಷೆಯನ್ನೀಡೇರಿಸಿಕೊಳ್ಳಬಯಸಿದರು. ಆದರೆ ಕಾಂಗ್ರೆಸ್ಸಿನಂಥ ಪ್ರಮುಖ ಪಕ್ಷವು ಯಾವ ಸರಕಾರದಲ್ಲಿ ಭಾಗವಹಿಸುವುದಿಲ್ಲವೊ ಅಂಥ ಸರಕಾರ ಅದೆಂತು ಪ್ರಾತಿನಿಧಿಕವಾಗಬಹುದು? ಮತ್ತು ಯಶಸ್ವಿಯಾಗಿ ಆಡಳಿತವನ್ನು ನಡೆಸಬಲ್ಲದು. ಇದನ್ನು ಮನದಂದು ವಾಯಿಸರಾಯರು ನಡುಗಾಲ ಸರಕಾರ ಯೋಜನೆಯನ್ನೆ ಹಿಂತೆಗೆದುಕೊಂಡರು. ಇದರಿಂದ ಮುಸ್ಲಿಂಲೀಗಿಗೆ ಒಳ್ಳೆಯ ಬುದ್ಧಿಕಲಿಸಿದಂತಾಯಿತು. ಕಾಂಗ್ರೆಸ್ಸಿನಂಥ ಪ್ರಾತಿನಿಧಿಕ ಸಂಸ್ಥೆ ಯೋಜನೆಯನ್ನು ನಿರಾಕರಿಸಿದಾಗ ಮುಸ್ಲಿಂ ಲೀಗವೂ ಸ್ವಲ್ಪಾದರೂ ರಾಷ್ಟ್ರೀಯ ಭಾವನೆಯನ್ನು ತಾಳಿ ಈ ಯೋಜನೆ ನಿರಾಕರಿಸಬೇಕಾಗಿತ್ತು. ಆದರೆ ಶಾಸನ ಸಭೆ ಚುನಾವಣೆ ಕಾಲಕ್ಕೆ ಮುಸ್ಲಿಂಲೀಗಿನವರು ಸಭೆಗಳಲ್ಲಿ ಮತದಾರರ ಮನವೊಲಿಸಲು ಮುಸ್ಲಿಂ ರಾಜ್ಯ ಸ್ಥಾಪನೆಯ ಆಮಿಷವನ್ನು ತೋರಿಸುತಿದ್ದುದನ್ನು ಕಾರ್ಯರೂಪದಲ್ಲಿ ತರಬೇಕೆಂದೇನೊ ಅವರು ಕಾಂಗ್ರೆಸ್ಸಿನ ಸಹಾಯವಿಲ್ಲದೆಯೆ ನಡುಗಾಲ ಸರಕಾರದಲ್ಲಿ ಸೇರಲು ಒಪ್ಪಿದರು. ಆದರೆ ಬ್ರಿಟಿಶ್ ಸರಕಾರದವರಿಗೇ ಇಂಥ ಸರಕಾರ ಯಶಸ್ವಿಯಾಗಿ ಆಡಳಿತ ಸಾಗಿಸಲಾರದೆಂದು ಮನವರಿಕೆಯಾದ್ದರಿಂದ ಮುಸ್ಲಿಂಲೀಗಿನ ನಡುಗಾಲ ರಾಜ್ಯ ಸ್ಥಾಪನೆಗೆ ಅವಕಾಶ ಕೊಡದೆ ಅಧಿಕಾರಿಗಳ ಜೋಪಾಸನಾ ಸರಕಾರವನ್ನು ತಾತ್ಪೂರ್ತಿಕವಾಗಿ ಸ್ಥಾಪಿಸಲಣಿಯಾಗಿರುವದು ಈ ಸರಕಾರ ಸ್ಥಾಪಿತವಾಗುವವರೆಗೆ ಈ ಜೋಪಾಸನಾ ಸರಕಾರವು ಆಡಳಿತವನ್ನು ಸಾಗಿಸುವುದು ವಾಯಿಸರಾಯರು ಮತ್ತು ಮಂತ್ರಿತ್ರಯರು ತಮ್ಮ ಜೂನ ೧೬ ನೇ ತಾರೀಕಿನ ಪ್ರಕಟನೆಯ ೮ ನೇ ಪ್ಯಾರಾದಲ್ಲಿ ಹೇಳಿದಂತೆ ಪ್ರಾತಿನಿಧಿಕ ನಡುಗಾಲ ಸರಕಾರ ಸ್ಥಾಪನೆಯ ತಮ್ಮ ಪ್ರಯತ್ನವನ್ನು ಹಾಗೆಯೆ ಸಾಗಿಸುವರು. ಮುಸ್ಲಿಂಲೀಗಿನವರು ಇನ್ನಾದರೂ ತಮ್ಮ ಅಸಮಂಜಸ ಧೋರಣವನ್ನು ತಿಳಿದುಕೊಂಡು ಕಾಂಗ್ರೆಸ್ಸಿಗೆ ತನ್ನ ಪ್ರತಿನಿಧಿಗಳನ್ನಾರಿಸಿಕೊಳ್ಳುವ ಅವಕಾಶಕೊಟ್ಟರೆ ನಡುಗಾಲ ಸರಕಾರ ಸ್ಥಾಪಿತವಾಗಬಲ್ಲದು. ಆದರೆ ಮುಸ್ಲಿಂಲೀಗಿನ ಇಂದಿನ ಧೋರಣದಲ್ಲಿ ಅಂಥ ಸಮಂಜಸತನವನ್ನಪೇಕ್ಷಿಸಬಹುದೆ?

## ಆಹಾರ ಪರಿಸ್ಥಿತಿ ಸುಧಾರಿಸಿಲ್ಲ

ಹಿಂದುಸ್ತಾನದ ಬಹುತರ ಎಲ್ಲ ಭಾಗಗಳಲ್ಲಿ ಈಗ ಮಳೆಯಾಗಿ ಬಿತ್ತನೆಯ ಕೆಲಸ ನಡೆದು ಎಲ್ಲೆಲ್ಲಿಯೂ ಹಸಿರು ಕಾಣುತಿರುವದರಿಂದ ಆಹಾರ ಪರಿಸ್ಥಿತಿ ಸುಧಾರಿಸಿದೆಂದು ಕೆಲವರು ಭಾವಿಸಬಹುದು. ಅಮೇರಿಕೆಯ ಆಹಾರ ಶಿಷ್ಟಮಂಡಳವೂ. ಇದೇ ಸಮಯಕ್ಕೆ ಹಿಂದುಸ್ತಾನಕ್ಕೆ ಬಂದುದರಿಂದ ಆ ಮಂಡಳದ ಸದಸ್ಯರೂ ಅಂತಹ ತಪ್ಪು ಕಲ್ಪನೆ ಮಾಡಿಕೊಳ್ಳಬಹುದು. ಈ ಸಂಬಂಧದಲ್ಲಿ ಅಧಿಕಾರಿಗಳೂ ಅಧಿಕಾರೇತರರೂ ದೇಶದಲ್ಲಿಯ ಆಹಾರ ಪರಿಸ್ಥಿತಿಯ ನಿಜ ಚಿತ್ರವನ್ನು ಅವರ ಮುಂದಿರಿಸಲು ಪ್ರಯತ್ನಿಸಬೇಕು. ಸದ್ಯದ ಮಳೆಯಿಂದ ಮುಂದಿನ ಪರಿಸ್ಥಿತಿಯೇನೊ ಆಶಾದಾಯಕವಿದೆ. ಆದರೆ ಇಷ್ಟರಿಂದಲೆ ಈಗಲೂ ಆಹಾರ ಧಾನ್ಯಗಳ ಅವಶ್ಯಕತೆಯಿಲ್ಲೆಂದು ತಿಳಿದುಕೊಳ್ಳುವದು ತಪ್ಪಾಗುವದು. ಕಾಮನ್ಸ ಸಭೆಯಲ್ಲಿ ಈ ಬಗ್ಗೆ ಉಪಭಾರತ ಮಂತ್ರಿಗಳಾದ ಹೆಂಡರಸನ್‌ರು ಹೇಳಿಕೆಯನ್ನೀಯುತ್ತ ಹಿಂದುಸ್ತಾನದ ಆಹಾರ ಪರಿಸ್ಥಿತಿ ಸುಧಾರಿಸಿಲ್ಲೆಂದು ಸ್ಪಷ್ಟವಾಗಿ ಹೇಳಿದರು. ಮೇ ತಿಂಗಳಲ್ಲಿ ಹಿಂದುಸ್ತಾನಕ್ಕೆ ಪೂರಯಿಸಬೇಕಾಗಿದ್ದ ೭೩೫೦೦೦ ಟನ್ ಧಾನ್ಯಗಳು ಪೂರಯಿಸಲ್ಪಡದೆ ಕೇವಲ ೧೭೩೦೦೦ ಟನ್ನು ಮಾತ್ರ ಕಳಿಸಿದೆಂದು ಹೇಳಿದರು. ಈ ಉಳಿದ ೬೩೦೦೦ ಟನ್ನು ಕೂಡಿಸಿ ಜೂನ ತಿಂಗಳಲ್ಲಿ ೩೩೬೦೦೦ ಟನ್ ಧಾನ್ಯ ತಲುಪಬೇಕಾಗಿದೆಂದು ಜುಲೈ ತಿಂಗಳಲ್ಲಿ ೧೦೮೦೦೦ ಟನ್ನುಗಳನ್ನು ಭಾರತಕ್ಕೆ ಪೂರಯಿಸಲು ಅಸ್ಟ್ರೇಲಿಯ ಒಪ್ಪಿದೆಂದು ಅಮೇರಿಕೆಯಿಂದಲೂ ಆಹಾರ ಧಾನ್ಯ ಬರಲಿವೆಯೆಂದೂ ಹೇಳಿದರು. ಪರದೇಶದಿಂದ ಬರಬೇಕಾದಷ್ಟು ಆಹಾರ ಪದಾರ್ಥಗಳ. ಹಿಂದುಸ್ತಾನಕ್ಕೆ ಬರಲಿಲ್ಲೆಂಬುದು ಇದರಿಂದ ಸ್ಪಷ್ಟವಾಗುವದು. ಅಮೇರಿಕೆಯಲ್ಲಿ ಹಿಂದುಸ್ತಾನ ಸರಕಾರದಪ್ರತಿನಿಧಿಯಾಗಿ ಆಹಾರ ಸಲಹೆಗಾರರಾಗಿರುವ ಡಾ. ವಿ. ಕೆ. ಆರ್. ವಿ. ರಾವ ಇವರೂ ಈಗ ಹಿಂದುಸ್ತಾನಕ್ಕೆ ದೊರೆತ ಆಹಾರ ಧಾನ್ಯಗಳಿಂದ ಸಮಾಧಾನ ಹೊಂದಿಲ್ಲ. ಹರ್ಬರ್ಟ ಮಾರಿಸನ್‌ರು ಗೊತ್ತುಪಡಿಸಿರುವ ೧೧೬೫೦೦೦ ಟನ್ ಆಹಾರ ಧಾನ್ಯ ಸ್ವಲ್ಪವೂ ಕಡಮೆಯಾಗದಂತೆ ಹಿಂದುಸ್ತಾನಕ್ಕೆ ಲಭಿಸುವುದೆಂದು ನನಗೆ ಭರವಸೆಯಾಗಿದೆಂದು ಮುಂತಾಗಿ ಹೇಳಿದರು. ಈ ಇಬ್ಬರು ಹೊಣೆಗಾರ ಅಧಿಕಾರಿಗಳ ಹೇಳಿಕೆಗಳನ್ನು ನೋಡಿದರೆ ಹಿಂದುಸ್ತಾನದ ಆಹಾರ ಪರಿಸ್ಥಿತಿ ಸಮಾಧಾನಕರವಾಗಿಲ್ಲೆಂಬುದು ಸ್ಪಷ್ಟವಾಗುವುದು. ಬಂಗಾಲ ಶಾಸನ ಸಭೆಯ ಕಮ್ಯುನಿಷ್ಟ ಸದಸ್ಯರು ಪ್ರಾಂತದ ಆಹಾರ ಪರಿಸ್ಥಿತಿ ೧೯೪೩ಕ್ಕಿಂತ ಹೆಚ್ಚು ಭೀಕರವಾಗಿದೆಂದೂ ದುಃಸ್ಥಿತಿಯನ್ನು ತಪ್ಪಿಸಬೇಕಾದರೆ ಕೂಡಲೆ ಸರಕಾರದವರು ಹೊರಗಿನಿಂದ ಧಾನ್ಯ ತರಿಸಿಕೊಳ್ಳಬೇಕೆಂದೂ ಅಭಿಪ್ರಾಯಪಟ್ಟಿರುವರು. ಬಿಹಾರ ಪ್ರಾಂತದ ಕೆಲ ಭಾಗದಲ್ಲಿಯೂ ಆಹಾರ ಪರಿಸ್ಥಿತಿ ನಿಕೃಷ್ಟವಾಗಿದೆಂದು ಪ್ರಸಿದ್ಧವಾಗಿದೆ. ಆದುದರಿಂದ ಹಿಂದುಸ್ತಾನ ಸರಕಾರದವರು ಮತ್ತು ಆಯಾ ಪ್ರಾಂತಿಕ ಸರಕಾರಗಳು ಕೂಡಲೆ ಇತ್ತ ಗಮನಿಸಿ ಹೊರಗಿನಿಂದ ಆಹಾರ ಪದಾರ್ಥಗಳನ್ನು ಬೇಗನೆ ತರಿಸಿಕೊಂಡು ಕೊರತೆಯ ಪ್ರದೇಶಕ್ಕೆ ಕಳಿಸಬೇಕು. ಮತ್ತು ಆ ಧಾನ್ಯಗಳು ಯೋಗ್ಯರೀತಿಯಿಂದ ಎಲ್ಲೆಡೆ ಹಂಚಲ್ಪಡುವಂತೆ ನಿರ್ಬಂಧಿಸಬೇಕೆಂದು ಒತ್ತಾಯಪಡಿಸುತ್ತೇವೆ.

## ನ್ಯಾಯಖಾತೆ ಬೇರ್ಪಡಿಸುವದು

ಮುಲ್ಕಿಖಾತೆಯಿಂದ ನ್ಯಾಯಖಾತೆಯನ್ನು ಬೇರ್ಪಡಿಸಬೇಕೆಂದು ಹಿಂದುಸ್ತಾನದಲ್ಲಿಯ ಕಾಯಿದೆ ಪಂಡಿತರು ಎಂದಿನಿಂದ ಹೇಳುತ್ತ ಬಂದಿರುವರು. ಮದ್ರಾಸದಲ್ಲಿ ಕಳೆದ ಸಲ ಕಾಂಗ್ರೆಸ ಮಂತ್ರಿಮಂಡಳವಿದ್ದಾಗ ಈ ಬಗ್ಗೆ ಹಲವರು ಸೂಚಿಸಿದ್ದರು. ಆದರೆ ಮುಖ್ಯಮಂತ್ರಿ ರಾಜಾಜಿಯವರು ಇದಕ್ಕೆ ಅನುಕೂಲ ಸಮಯ ವಿನ್ನೂ ಬಂದಿಲ್ಲೆಂದು ವಿಚಾರವನ್ನು ಮುಂದಕ್ಕೆ ಹಾಕಿದರು. ಈಗ ಮದ್ರಾಸ ಕಾಯದೆ ಮಂತ್ರಿಗಳಾದ ಶ್ರೀ ಭಾಷ್ಯಂರವರು ನ್ಯಾಯಖಾತೆಯನ್ನು ಬೇರ್ಪಡಿಸಬೇಕೆಂದು ವಿಚಾರ ನಡೆಸಿ ಆ ಬಗೆ ಒಂದು ಯೋಜನೆಯನ್ನು ಸಿದ್ಧಪಡಿಸಿರುವರು. ಕ್ರಿಮಿನಲ್ ಪ್ರೊಸೀಜರ ಕೋಡಿನ ಮೇರೆಗೆ ಜಿಲ್ಲಾ ಮ್ಯಾಜಿಸ್ಟ್ರೇಟರ ಕರ್ತವ್ಯ ನಿರ್ವಹಿಸಲು ಹಾಗು ಅಧಿಕಾರ ನಡೆಸಲು ಜಿಲ್ಲಾ ಕಲೆಕ್ಟರರಿಂದ ಪ್ರತ್ಯೇಕವಾಗಿ ಜಿಲ್ಲಾ ಮ್ಯಾಜಿಸ್ಟ್ರೇಟರು ನೇಮಿಸಲ್ಪಡುವರು ಈ ಜಿಲ್ಲಾ ಮ್ಯಾಜಿಸ್ಟ್ರೇಟರು ಜಿಲ್ಲಾ ಕಲೆಕ್ಟರರಿಗೆ ಅಧೀನರಾಗದೆ ನೇರವಾಗಿ ಪ್ರಾಂತಿಕ ಸರಕಾರಕ್ಕೆ ಅಧೀನರಾಗುವರು. ಕ್ರಿಮಿನಲ್ ಆಡಳಿತವನ್ನು ಕೂಡಲೆ ಹಾಯಕೋರ್ಟಿಗೆ ಅಧೀನಪಡಿಸುವದು ಯೋಜನೆಯ ಇಚ್ಛೆಯಿಲ್ಲ. ಆದರೆ ಭಾವೀಘಟನಾತ್ಮಕ ಬದಲಾವಣೆಗನುಸಾರವಾಗಿ ಹಾಯಕೋರ್ಟ ಪ್ರಾಂತಿಕ ಯಾದಿಯಲ್ಲಿ ಬಂದ ಮೇಲೆ ಕ್ರಿಮಿನಲ್ ಆಡಳಿತವನ್ನು ಹಾಯಕೋರ್ಟಿಗೆ ಅಧೀನಪಡಿಸಿ ಎರಡೂ ಖಾತೆಯು ಸಂಪೂರ್ಣ ಪ್ರತ್ಯೇಕ ಮಾಡಲಾಗುವದು. ಸರ್ ತೇಜಬಹಾದ್ದೂರ ಸಪ್ರುರಂಥ ಕಾಯುದೇ ಪಂಡಿತರು ಈ ಸುಧಾರಣೆಯನ್ನು ಸ್ವಾಗತಿಸಿರುವರು. ಬಹಳ ದಿವಸಗಳ ಹಿಂದೆಯೆ ಆಗಬೇಕಾಗಿದ್ದ ಈ ಸುಧಾರಣೆ ಈಗ ಕೈಕೊಳ್ಳುವದು ಅಭಿನಂದನೀಯವೆಂದು ಹೇಳಬೇಕಾಗುವದು. ಹಿಂದುಸ್ತಾನ ಸರಕಾರದ ಕಾಯುದೆಯಲ್ಲಿ ತಿದ್ದುಪಡಿಮಾಡಿ ಪ್ರಾಂತಿಕ ಮಂತ್ರಿಮಂಡಳಕ್ಕಾಗಲಿ ಶಾಸನ ಸಭೆಗಳಿಗಾಗಲಿ ಈ ಬದಲಾವಣೆ ಮಾಡುವ ಅಧಿಕಾರವಿಲ್ಲೆಂದು ಯುಕ್ತಪ್ರಾಂತದ ಕಾಯದೆ ಮಂತ್ರಿ ಡಾ॥ ಕಟಜೂರವರು ಅಭಿಪ್ರಾಯಪಟ್ಟಿದ್ದಾರೆ. ಹಿಂದುಸ್ತಾನಕ್ಕೆ ಸಂಪೂರ್ಣ ಸ್ವಾತಂತ್ರ್ಯ ಸಿಕ್ಕದೆ ಇವೆಲ್ಲ ಯೋಜನೆಗಳು ಅಷ್ಟೊಂದು ಯಶಸ್ವಿಯಾಗಲಾರವೆಂಬುದು ಸ್ಪಷ್ಟವಿದ್ದರೂ ಕಾಯುದೆಮಂತ್ರಿಗಳು ಇತ್ತ ಗಮನಿಸುವಲ್ಲಿ ಯಾವ ಹಾನಿಯೂ ಇಲ್ಲೆಂದು ಹೇಳಬಹುದಾಗಿದೆ. ಕಾಂಗ್ರೆಸ ಪ್ರಾಂತಗಳ ಕಾಯುದೇ ಮಂತ್ರಿಗಳೆಲ್ಲ ಒಂದೆಡೆ ಕೂಡಿ ಈ ಬಗ್ಗೆ ವಿಚಾರ ಮಾಡಿ ಒಂದು ಯೋಜನೆ ಸಿದ್ಧಪಡಿಸಿ ಕಾರ್ಯರೂಪದಲ್ಲಿ ತರುವುದು ಹೆಚ್ಚು ಯುಕ್ತವು. ಉಳಿದ ಪ್ರಾಂತಿಕ ಸರಕಾರಗಳೂ ಇದರಲ್ಲಿ ಕೂಡ ಬಯಸಿದರೆ ಅವುಗಳ ಸಹಕಾರವನ್ನೂ ಪಡೆಯಬಹುದು. ಅಂತೂ ಎಲ್ಲ ಪ್ರಾಂತಗಳಲ್ಲಿ ಏಕಕಾಲದಲ್ಲಿ ಮುಲ್ಕಿ ಮತ್ತು ನ್ಯಾಯಖಾತೆಗಳು ಬೇರ್ಪಟ್ಟರೆ ಹೆಚ್ಚು ಉಪಯುಕ್ತವಾಗುವದು.

## ಸಕ್ಕರೆ—ಬೆಲ್ಲ

ಮಾನವನ ಶರೀರವು ಪುಷ್ಟಿಕರವಾಗುಳಿಯಲಿಕ್ಕೆ ಅವಶ್ಯಕವಾದ ಪದಾರ್ಥಗಳಲ್ಲಿ ಬೆಲ್ಲ—ಸಕ್ಕರೆ ಮಹತ್ವದ್ದೆಂದು ಹೇಳಬಹುದು. ಅಂತೆಯೆ ಸಕ್ಕರೆಯ ಉತ್ಪಾದನಕ್ಕಾಗಿ ಎಲ್ಲ ದೇಶಗಳು ಪರಿಶ್ರಮಿಸುತ್ತವೆ. ನಮ್ಮ ದೇಶದಲ್ಲಿಯಾದರೂ ಕಬ್ಬು ಬೆಳೆವ ಭೂಮಿ ಮತ್ತು ಸಕ್ಕರೆ ಕಾರಖಾನೆಗಳಿದ್ದರೂ ಸರಕಾರದ ಪ್ರತಿಕೂಲ ಧೋರಣದಿಂದ ಅವಷ್ಟೊಂದು ಪ್ರಗತಿ ಹೊಂದಲೊಲ್ಲವು. ಇಷ್ಟು ಅವಶ್ಯಕವಾದ ಸಕ್ಕರೆ—ಬೆಲ್ಲ ಕೂಡ ಬಹಳ ಕಡಮೆ ಪ್ರಮಾಣದಲ್ಲಿ ನಮ್ಮ ಜನತೆಗೆ ಸಿಕ್ಕುತಿರುವವು. ಇಂಗ್ಲಂಡದಲ್ಲಿ ಪ್ರತಿಯೊಬ್ಬನಿಗೆ ಒಂದು ವರ್ಷಕ್ಕೆ ಸರಾಸರಿ ೧೦೬ ಪೌಂಡು ಸಕ್ಕರೆ ಸಿಕ್ಕುತಿದ್ದರೆ ನಮ್ಮ ಹಿಂದುಸ್ತಾನದಲ್ಲಿ ಸಕ್ಕರೆ....ಬೆಲ್ಲ ಎರಡೂ ಕೂಡಿಸಿ ಕೇವಲ ೨೭ ಪೌಂಡು ಪ್ರತಿಯೊಬ್ಬರಿಗೆ ದೊರೆಯುವುದು. ಆದರಲ್ಲಿ ಕೇವಲ ಸಕ್ಕರೆಯೊಂದರ ಲೆಕ್ಕವನ್ನೆ ನೋಡಿದರೆ ವರ್ಷಕ್ಕೆ ಪ್ರತಿಯೊಬ್ಬನಿಗೆ ೭ ಪೌಂಡು ಮಾತ್ರ ಸಿಕ್ಕುವುದೆಂಬುದು ಕಂಡುಬರುವುದು. ಜಗತ್ತಿನಲ್ಲಿ ಬೇರೆ ಯಾವ ರಾಷ್ಟ್ರದಲ್ಲಿಯೂ ಜನರು ಇಷ್ಟು ಕಡಮೆ ಸಕ್ಕರೆಯನ್ನುಪಯೋಗಿಸುವುದಿಲ್ಲ. ಹಿಂದುಸ್ತಾನವು ಅಸ್ವತಂತ್ರ ರಾಷ್ಟ್ರವಾದ್ದರಿಂದ ಪ್ರತಿಯೊಂದು ಸಂಗತಿಯಲ್ಲಿಯೂ ಯಾವರೀತಿಯಿಂದ ಕೊರಗುತಿದೆಂಬುದು ಗೊತ್ತಾಗುತ್ತದೆ. ಅಸ್ಟ್ರೇಲಿಯದಂಥ ದೇಶವು ಪ್ರತಿವರ್ಷ ಒಬ್ಬರಿಗೆ ೧೧೬ ಪೌಂಡಿನಷ್ಟು ಸಕ್ಕರೆಯನ್ನು ಒದಗಿಸುತ್ತದೆ. ಆದರೆ ಹಿಂದುಸ್ತಾನದಲ್ಲಿ ಬೇಕಾದಷ್ಟು ಸಾಧನ ಸಂಪತ್ತಿದ್ದರೂ ನಿತ್ಯದ ಉಪಯೋಗಕ್ಕೆ ಬೇಕಾದಷ್ಟು ಕೂಡ ಬೆಲ್ಲ....ಸಕ್ಕರೆ ಸಿಕ್ಕದಿದ್ದರೆ ಭಾರತೀಯರು ಅದೆಂತು ಪುಷ್ಟರೂ ಆಯುಷ್ಮಂತರೂ ಆಗಬಲ್ಲರು? ಪ್ರತಿಯೊಬ್ಬನಿಗೆ ವರ್ಷಕ್ಕೆ ಕನಿಷ್ಠ ೪೬ ಪೌಂಡಿನಷ್ಟಾದರೂ ಸಕ್ಕರೆ ಬೇಕೆಂದು ಆಹಾರತಜ್ಞರು ಹೇಳುತ್ತಾರೆ. ಆದರೆ ಹಿಂದುಸ್ತಾನದಲ್ಲಿ ಈಗ ಉತ್ಪಾದನವಾಗುತಿರುವ ಸಕ್ಕರೆಯಿಂದ ಪ್ರತಿಯೊಬ್ಬರಿಗೆ ವರ್ಷಕ್ಕೆ ೭ ಪೌಂಡು ಮಾತ್ರ ಸಕ್ಕರೆ ಸಿಕ್ಕುವುದು. ೧೯೪೪—೪೫ ರಲ್ಲಿ ಹಿಂದುಸ್ತಾನದಲ್ಲಿ ಕೇವಲ ೯। ಲಕ್ಷ ಟನ್ ಸಕ್ಕರೆ ಉತ್ಪಾದಿಸಲ್ಪಟ್ಟಿತು. ಯುದ್ಧಪೂರ್ವದಲ್ಲಿಯಾದರೊ ೧೧ ಲಕ್ಷ ಟನ್ ಹೊರಡುತಿತ್ತು. ಅದೂ ಕಡಮೆಯೆಂದು ಹೇಳಬಹುದು. ಆದುದರಿಂದ ಹಿಂದುಸ್ತಾನದಲ್ಲಿ ಸಕ್ಕರೆ-ಬೆಲ್ಲದ ಉತ್ಪಾದನೆ ಇನ್ನೂ ಬಹಳ ಹೆಚ್ಚುವಂತೆ ನೋಡಿಕೊಳ್ಳುವುದವಶ್ಯವಾಗಿದೆ. ಹಿಂದುಸ್ತಾನ ಸರಕಾರದವರು ಇತ್ತ ಗಮನಿಸಿ ಬೆಲ್ಲ-ಸಕ್ಕರೆ ಹೆಚ್ಚುಪ್ರಮಾಣದಿಂದ ಜನರಿಗೆ ಸಿಕ್ಕುವಂತೆ ಮಾಡಬೇಕೆಂದು ಆಗ್ರಹಪಡಿಸುತ್ತೇವೆ.

# ಕೇಂದ್ರದಲ್ಲಿ ಅಧಿಕಾರಿಗಳ ಜೋಪಾಸನಾ ಸರಕಾರ

### ಕಾರ್ಯಸಮಿತಿಯ ನಿರ್ಣಯ

ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ತನ್ನ ನಿರ್ಣಯದಲ್ಲಿ ಸಾಧ್ಯವಿದ್ದಷ್ಟು ಬೇಗನೆ ಪ್ರಾತಿನಿಧಿಕ ತಾತ್ಪೂರ್ತಿಕ ರಾಷ್ಟ್ರೀಯ ಸರಕಾರ ಸ್ಥಾಪಿಸುವದು ಅವಶ್ಯವಿದೆಂದು ಪ್ರತಿಪಾದಿಸಿದ್ದಲ್ಲದೆ ತಾತ್ಪೂರ್ತಿಕ ಇಲ್ಲವೆ ಯಾವದೆ ಸರಕಾರದ ರಚನೆಯಲ್ಲಿ ಕಾಂಗ್ರೆಸ್ಸು ತನ್ನ ರಾಷ್ಟ್ರೀಯ ಸ್ವರೂಪ ಬಿಟ್ಟುಗೊಡಲಾರದೆಂದೂ ಕೃತ್ರಿಮ ಮತ್ತು ಅನ್ಯಾಯದ ಸಮಪ್ರಾತಿನಿಧ್ಯಕ್ಕೆ ಒಪ್ಪಿಕೊಳ್ಳಲಾರದೆಂದೂ ಜಾತೀಯ ಗುಂಪಿನ ಪ್ರತಿಬಂಧಾಧಿಕಾರಕ್ಕೆ ಸಮ್ಮತಿಸದೆಂದೂ ಸ್ಪಷ್ಟಪಡಿಸಿದೆ.

ಜಗತ್ತಿನಲ್ಲಿಯ ಎಲ್ಲ ರಾಷ್ಟ್ರಗಳ ಆದರಕ್ಕೆ ಪಾತ್ರವಾಗುವ ಪರಮಾವಧಿ ಪ್ರಾಂತಿಕ ಸ್ವಾಯತ್ತತೆ ಹಾಗು ದೇಶದಲ್ಲಿಯ ಎಲ್ಲ ಸ್ತ್ರೀ ಪುರುಷರಿಗೆ ಸಮಾನವಾದ ಹಕ್ಕುಗಳನ್ನೊಳಗೊಂಡ ಕೇಂದ್ರದಲ್ಲಿ ಅಧಿಕಾರಯುಕ್ತವಾದ ಅಖಂಡ ಪ್ರಜಾಸತ್ತಾತ್ಮಕ ಹಿಂದೀ ಒಕ್ಕೂಟವನ್ನು ಸ್ಥಾಪಿಸುವದೇ ಕಾಂಗ್ರೆಸ್ಸು ಇಟ್ಟುಕೊಂಡ ಸ್ವಾತಂತ್ರ್ಯದ ಗುರಿ. ಯೋಜನೆಗಳಲ್ಲಿ ಕೇಂದ್ರ ಸರಕಾರದ ಅಧಿಕಾರ ಮರ್ಯಾದಿತಪಡಿಸಲ್ಪಟ್ಟಿರುವದಲ್ಲದೆ ಪ್ರಾಂತಗಳ ಗುಂಪಿನ ಪದ್ಧತಿ ಸ್ವೀಕರಿಸಿ ಇಡೀ ರಚನೆಯನ್ನು ದುರ್ಬಲಗೊಳಿಸಲಾಗಿದೆ. ಗಡಿನಾಡು ಹಾಗು ಅಸಾಮ ಮೊದಲಾದ ಪ್ರಾಂತಗಳಿಗೂ ಕೆಲ ಅಲ್ಪಸಂಖ್ಯಾಕರಿಗೂ ವಿಶೇಷತಃ ಶೀಖರಿಗೂ ಈ ಪದ್ಧತಿ ಅಯೋಗ್ಯವಾಗಿರುವದೆಂದು ಸಮಿತಿಯ ಅಭಿಪ್ರಾಯ. ಆದರೂ ಸ್ವತಂತ್ರ ಅಖಂಡ ಹಾಗು ಪ್ರಜಾಸತ್ತಾತ್ಮಕ ಹಿಂದುಸ್ತಾನದ ಘಟನೆ ರಚಿಸಲು ಭಾವೀ ಘಟನಾ ಸಮಿತಿಯಲ್ಲಿ ಕಾಂಗ್ರೆಸ್ ಸೇರಬೇಕೆಂದು ನಿಶ್ಚಯಿಸಿದೆ." ಘಟನಾಸಮಿತಿಯಲ್ಲಿ ಕಾಂಗ್ರೆಸ್ಸು ಭಾಗವಹಿಸಬೇಕೆಂದು ಸಮಿತಿಯು ಒಪ್ಪಿದ್ದರೂ ಪ್ರಾತಿನಿಧಿಕ ಹಾಗು ಹೊಣೆಗಾರ ತಾತ್ಪೂರ್ತಿಕ ಸರಕಾರ ಸಾಧ್ಯವಿದ್ದಷ್ಟು ಬೇಗ ರಚಿಸಬೇಕಾದುದು ಅವಶ್ಯವಾಗಿದೆ. ಸರ್ವಾಧಿಕಾರಿ ಹಾಗು, ಪ್ರಾತಿನಿಧಿಕ ಸರಕಾರವನ್ನು ಹೀಗೆಯೆ ಸಾಗಿಸಿಕೊಂಡು ಹೋಗುವದು ಉಪವಾಸ ಬಳಲುತಿರುವ ಜನರ ಸಂಕಷ್ಟಗಳನ್ನು ಹೆಚ್ಚಿಸಲು ಹಾಗು ಅಸಂತೋಷ ಹುಟ್ಟಿಸಲು ಕಾರಣವಾಗುವದು. ಅದರಿಂದ ಘಟನಾ ಸಮಿತಿಯ ಕಾರ್ಯಕ್ಕೂ ಧಕ್ಕೆಯುಂಟಾಗುವದು. ಘಟನಾಸಮಿತಿಗೆ ಸಂಪೂರ್ಣ ಸ್ವತಂತ್ರ ವಾತಾವರಣ ಅವಶ್ಯವಿದೆ.

### ಯೋಜನೆಯ ನಿರಾಕರಣೆ

ಬ್ರಿಟಿಶ ಮಂತ್ರಿತ್ರಯರು ಹಿಂದುಸ್ತಾನದ ಬಿಕ್ಕಟ್ಟು ಬಿಡಿಸುವದಕ್ಕಾಗಿ ಬಂದು ಮೂರು ವಾರಗಳ ಪರಿಗೆ ವಿಚಾರ ವಿನಿಮಯ ಮಾಡಿ ಜೂನ ೧೬ ನೇ ತಾರೀಕಿನ ದಿವಸ ನಡುಗಾಲ ಸರಕಾರ ಯೋಜನೆಯನ್ನು ಸಾರಿದರಷ್ಟೆ. ಈ ಯೋಜನೆಯನ್ನು ದೇಶದಲ್ಲಿಯ ಪ್ರಮುಖ ಪಕ್ಷಗಳು ಒಪ್ಪಿದ್ದಾದರೆ ಜೂನ ೨೬ ಕ್ಕೆ ನಡುಗಾಲ ಸರಕಾರವನ್ನು ಸ್ಥಾಪಿಸುವದಾಗಿಯೂ ಅವರು ಪ್ರಕಟಿಸಿದರು. ಹಿಂದುಸ್ತಾನದ ಪ್ರಮುಖ ರಾಷ್ಟ್ರೀಯ ಪಕ್ಷವಾದ ಕಾಂಗ್ರೆಸ್ಸು ಈ ಅರಾಷ್ಟ್ರೀಯ ಮತ್ತು ದೋಷಪೂರ್ಣವಾದ ಯೋಜನೆಯನ್ನು ನಿರಾಕರಿಸಿ ಬಿಟ್ಟಿತು. ಆದರೆ ಮುಸ್ಲಿಂ ಲೀಗದ ಕಾರ್ಯಕಾರಿ ಮಂಡಳವು ಈ ಯೋಜನೆಯನ್ನು ಸ್ವೀಕರಿಸುವ ಗೊತ್ತುವಳಿ ಮಾಡಿದೆ. ಕಾಂಗ್ರೆಸ ವರ್ಕಿಂಗ ಕಮೀಟಿಯವರು ಈಬಗ್ಗೆ ಮಾಡಿದ ಗೊತ್ತುವಳಿ ೬೦೦ ಶಬ್ದಗಳಿಂದ ಕೂಡಿದ್ದು ಅದರ ಸಾರ ಮೇಲೆ ಕೊಟ್ಟಿದೆ. ಅದನ್ನು ವಾಯಿಸರಾಯರಿಗೆ ತಿಳಿಸುವಾಗ ರಾಷ್ಟ್ರಪತಿ ಮೌಲಾನಾ ಅಬುಲ್ ಕಲಂ ಅಜಾದರು ೧೫೦೦ ಶಬ್ದಗಳ ಪತ್ರವೊಂದನ್ನು ಬರೆದಿದ್ದು ಕಾಂಗ್ರೆಸ್ಸಿನ ಧ್ಯೇಯಧೋರಣಗಳನ್ನು ಅದರಲ್ಲಿ ಸ್ಪಷ್ಟಪಡಿಸಿದ್ದಾರೆ.

### ಕಾಂಗ್ರೆಸ್ಸು ರಾಷ್ಟ್ರೀಯ ಸಂಸ್ಥೆ

ಕಾಂಗ್ರೆಸ್ಸು ರಾಷ್ಟ್ರೀಯ ಸಂಸ್ಥೆ. ಎಲ್ಲ ಜಾತಿ, ಧರ್ಮಗಳ ಜನರು ಅದರಲ್ಲಿರುವರು. ಹಿಂದುಸ್ತಾನದ ಸ್ವಾತಂತ್ರ್ಯ ಮತ್ತು ಎಲ್ಲರಿಗೆ ಸಮಾನ ಹಕ್ಕು ಬಾಧ್ಯತೆಗಳನ್ನು ದೊರಕಿಸುವದಕ್ಕಾಗಿ

## ನಡುಗಾಲ ಸಮ್ಮಿಶ್ರ ಸರಕಾರ ಸ್ಥಾಪನೆ ಸಾಧ್ಯವಾಗಲಿಲ್ಲ

### ಘಟನಾಸಮಿತಿಯ ಸಭೆ ಅಗಸ್ಟ ೧೦ ಕ್ಕೆ ಕೂಡಬಹುದು

ಅರ್ಧ ಶತಮಾನಕ್ಕಿಂತಲೂ ಹೆಚ್ಚು ಕಾಲದಿಂದ ಅದು ಪ್ರಯತ್ನಿಸುತ್ತಿದೆ. ರಾಷ್ಟ್ರೀಯ ಸ್ವಾತಂತ್ರ್ಯ, ಅರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ಸಮಾನತೆಗಳೇ ಎಲ್ಲರನ್ನು ಒಕ್ಕೂಟದಲ್ಲಿ ತರಲು ಸಮರ್ಥವಾಗಿವೆ. ಈ ದೃಷ್ಟಿಯಿಂದಲೂ ಎಲ್ಲ ಯೋಜನೆಗಳನ್ನು ಪರೀಕ್ಷಿಸಬೇಕಾಗುವದೆಂದು ಅಝಾದರು ಬರೆದಿರುವರು. ಈ ಸಂಬಂಧದಲ್ಲಿ ಮೇ ೩೦ ಕ್ಕೆ ನೀವು ಬರೆದ ಪತ್ರದಲ್ಲಿ ಸಮಾಧಾನಕರ ಅಶ್ವಾಸನವಿಲ್ಲದಿದ್ದರೂ ಮಿತ್ರತ್ವದ ನುಡಿಗಳಿಗೆ ನಾವು ಒಪ್ಪಿದೆವು. ಸಮಪ್ರಾತಿನಿಧ್ಯಕ್ಕೆ ಎಂದೂ ಯಾವ ಕಾಲದಲ್ಲಿಯೂ ಒಪ್ಪಲಾರೆವೆಂದು ಹೇಳಿದೆವು. ಕಾರ್ಯಕಾರಿ ಮಂಡಳದಲ್ಲಿ ೧೫ ಜನ ಇರಬೇಕೆಂದು ತಿಳಿಸಿ ರಾಷ್ಟ್ರೀಯ ಮುಸಲ್ಮಾನರೊಬ್ಬರ ಹೆಸರನ್ನೂ ಸೂಚಿಸಿದೆವು.

### ಜೂನ ೧೬ ರ ಪ್ರಕಟನೆ

ಆದರೆ ಜೂನ ೧೬ ಕ್ಕೆ ನೀವು ಹೊರಡಿಸಿದ ಪ್ರಕಟನೆ ನೋಡಿ ನಮಗೆ ಆಶ್ಚರ್ಯವಾಯಿತು. ಕಾಂಗ್ರೆಸ್ಸು ಸೂಚಿಸಿದ ಹೆಸರಿಲ್ಲ ಅದರಲ್ಲಿರಲಿಲ್ಲ, ಅದರಲ್ಲಿ ಯಾವ ಬದಲಾವಣೆಯಾಗದೆಂದು ಸಾರಿದ್ದನ್ನು ನೋಡಿ ಎಲ್ಲವೂ ತಪ್ಪು ಹಾದಿ ಹಿಡಿದು ಸಾಗಿದೆಂದು ನಾವು ತಿಳಿದೆವು. ರಾಷ್ಟ್ರೀಯ ಮುಸಲ್ಮಾನರ ಹೆಸರು ಇದರಲ್ಲಿಲ್ಲದ್ದು ಮಹತ್ವದ ದೋಷವೆಂದು ನಾವು ಬಗೆದೆವು. ನಮ್ಮ ಯಾದಿಯಲ್ಲಿ ಬೇಕಾದವರ ಹೆಸರು ಹಾಕಲು ಯಾರೂ ಅಕ್ಷೇಪಿಸಲಾರರೆಂದು ಭಾವಿಸಿದೆವು. ಸರಹದ್ದ ಶಾಸನ ಸಭೆ ಚುನಾವಣೆಯಲ್ಲಿ ಉರುಳಿದವರ ಹೆಸರು ಮುಸ್ಲಿಂ ಲೀಗಿನಲ್ಲಿ ಬಂದದ್ದಕ್ಕಾಗಿ ನಾವು ಅಕ್ಷೇಪಿಸಿದಾಗ ಹೀಗೆ ಅಕ್ಷೇಪಿಸಲಾರರೆಂದೂ ಯೋಗ್ಯತೆ ಮಾತ್ರ ನೋಡಬೇಕೆಂದೂ ನೀವು ಸೂಚಿಸಿದಿರಿ. ಆದರೆ ನಾವು ಸೂಚನೆ ಮಾಡುವ ಮೊದಲೇ ೨೨ ನೇ ತಾರೀಕಿಗೆ ಪತ್ರ ಬರೆದು ಕಾಂಗ್ರೆಸ್ಸು ಮುಸಲ್ಮಾನರ ಹೆಸರನ್ನು ಸೂಚಿಸಲಿಕ್ಕೆ ಒಪ್ಪಲಾರೆವೆಂದು ತಿಳಿಸಿದಿರಿ. ಮೇಲೆ ಉಲ್ಲೇಖಿಸಿದ ಪ್ರಕಟನೆಗೇ ಇದು ವಿರುದ್ಧವಾಗಿದೆ. ತಮ್ಮ ಜನರನ್ನಾರಿಸುವ ಹಕ್ಕು ಕಾಂಗ್ರೆಸ್ಸಿಗಿಲ್ಲೆಂದು ಇದರಿಂದ ಸಿದ್ಧವಾಯಿತು. ಇದೇನು ಕಾಯಂ ಯೋಜನೆಯಲ್ಲೆಂದು ನೀವು ತಿಳಿಸಿದಿರಿ. ಆದರೆ ಇಂಥ ಮಹತ್ವದ ತತ್ವವನ್ನೂ ತಾತ್ಪೂರ್ತಿಕವಾಗಿಯಾದರೂ ಕಾಂಗ್ರೆಸ್ಸು ಬಿಟ್ಟುಗೊಡುವದು ಶಕ್ಯವಿಲ್ಲ. ಜಿನ್ನಾರವರು ತಮ್ಮ ಪತ್ರದಲ್ಲಿ ಹರಿಜನರನ್ನು ಅಲ್ಪಸಂಖ್ಯಾಕರಲ್ಲಿ ಎಳೆದಿದ್ದಾರೆ. ನೀವೂ ಅದಕ್ಕೆ ಹೂಂಗುಟ್ಟಿರುವಿರಿ. ಆದರೆ ಹರಿಜನರು ಹಿಂದುಗಳಲ್ಲಿ ಮಹತ್ವದ ಭಾಗವೆಂಬುದಾಗಿ ನಾವು ತಿಳಿಯುತ್ತೇವೆ. ಸಮಪ್ರಾತಿನಿಧ್ಯವಿಲ್ಲೆಂದೂ ನೀವು ಬರೆದಿರುವಿರಿ ಆದರೆ ಹರಿಜನರನ್ನು ಅಲ್ಪ ಸಂಖ್ಯಾಕರಲ್ಲಿ ಎಳೆದು ಸಮಪ್ರಾತಿನಿಧ್ಯ ಕಲ್ಪಿಸಬಯಸುವಿರಿ. ಅಲ್ಪಸಂಖ್ಯಾಕರ ಪ್ರತಿನಿಧಿಗಳನ್ನಾರಿಸುವಾಗಲೂ ಮುಸ್ಲಿಂ ಲೀಗಿನ ಧುರೀಣರು ಹಸ್ತಕ್ಷೇಪ ಮಾಡಬಯಸುವರು. ಇದಕ್ಕೆ ನಾವೊಪ್ಪಲಾರೆವು ಯಾವದೊಂದು ಜಾತಿಗೆ ಸಂಬಂಧಿಸಿದ ಮಹತ್ವದ ವಿಷಯಕ್ಕೆ ಆಯಾ ಜಾತಿಯ ಬಹುಸಂಖ್ಯಾಕರ ವಿರೋಧವಿದ್ದರೆ ನಡುಗಾಲ ಸರಕಾರವು ಆದರ ಬಗ್ಗೆ ನಿರ್ಣಯವನ್ನೆ ಮಾಡಲಾರದೆಂದು ನೀವೆನ್ನುವಿರಿ ಇದಕ್ಕೆ ನಾವು ಒಪ್ಪುವದಿಲ್ಲ. ಹೀಗೆ ಮಾಡಿದ್ದಾದರೆ ನಡುಗಾಲ ಸರಕಾರವಕ್ಷ ವಿಶೇಷಾಧಿಕಾರ ಕೊಟ್ಟಂತಾಗುವದು. ಇವೆಲ್ಲ ಮಹತ್ವದ ದೋಷಗಳಿರುವದರಿಂದ ನಡುಗಾಲ ಸರಕಾರದ ಆಡಳಿತ ಸುಗಮವಾಗಿ ಸಾಗದೆ ಬಿಕ್ಕಟ್ಟುಂಟಾಗುವದು ಖಂಡಿತ. ಅದುದರಿಂದ ಈ ಯೋಜನೆಯಿಂದ ನಮ್ಮ ಉದ್ದೇಶ ಸಾಧ್ಯವಾಗದೆಂದು ಮನಗಂಡು ಇದನ್ನು ನಿರ್ವಾಹವಿಲ್ಲದೆ ನಿರಾಕರಿಸುತ್ತೇವೆ. ಇನ್ನು ನೀವು ಮೇ ೧೬ ಕ್ಕೆ ಹೊರಡಿಸಿದ ದೀರ್ಘಾವಧಿ ಯೋಜನೆಯೂ ದೋಷ ಪೂರ್ಣವಾಗಿದ್ದರೂ ನಮ್ಮ ಧ್ಯೇಯ ಸಾಧನೆಗಾಗಿ ಅದನ್ನು ಕಾರ್ಯಕಾರಿ ಮಾಡಬಯಸುತ್ತೇವೆ. ಆದರೆ ಈ ಯೋಜನೆ ಯಶಸ್ವಿಯಾಗಬೇಕಾದರೆ ಸಮಾಧಾನಕರವಾದ ನಡುಗಾಲ ಸರಕಾರ ರಚಿಸಲ್ಪಡುವದು ಅತ್ಯವಶ್ಯವೆಂದು ನಾವು ಹೇಳಬಯಸುತ್ತೇವೆಂದು ಮುಂತಾಗಿ ಈ ಪತ್ರದಲ್ಲಿ ಅಝಾದ ಸಾಹೇಬರು ಬರೆದು ಬ್ರಿಟಿಶ್ ಸರಕಾರದ ನಡುಗಾಲ ಯೋಜನೆಯನ್ನು ನಿರಾಕರಿಸಿಬಿಟ್ಟರು.

### ಮುಸ್ಲಿಂಲೀಗಿನ ಸಹಕಾರ

ಮುಸ್ಲಿಂಲೀಗ ಕಾರ್ಯಕಾರೀ ಮಂಡಳವು ನಡುಗಾಲ ಸರಕಾರದ ಮತ್ತು ದೀರ್ಘಾವಧಿ ಯೋಜನೆಗಳನ್ನು ಸ್ವೀಕರಿಸುವ ಗೊತ್ತುವಳಿಯನ್ನು ಮಾಡಿ ವಾಯಿಸರಾಯರಿಗೆ ತಿಳಿಸಿ ನಡುಗಾಲ ಸರಕಾರ ಸ್ಥಾಪನೆಯ ಮುಂದಿನ ಕಾರ್ಯದಲ್ಲಿ ಪ್ರವೃತ್ತರಾಗಬೇಕೆಂದು ಕೇಳಿಕೊಂಡಿದ್ದಾರೆ.

### ನಡುಗಾಲ ಸರಕಾರ ಸಾಧ್ಯವಿಲ್ಲ

ಮುಸ್ಲಿಂಲೀಗದವರು ಇಂತು ನಡುಗಾಲ ಸರಕಾರದಲ್ಲಿ ಸೇರಲು ಸಿದ್ಧರಾಗಿದ್ದರೂ ಪ್ರಮುಖ ಪಕ್ಷವಾದ ಕಾಂಗ್ರೆಸ್ಸಿನ ಆರು ಜನ ಪ್ರತಿನಿಧಿಗಳು ಮತ್ತು ಸರದಾರ ಬಲದೇವಸಿಂಗ ಹಾಗು ಡಾ. ಜಾನ ಮಥಾಯಿ ಇವರು ಅದರಲ್ಲಿ ಸೇರಲು ಒಪ್ಪದಿದ್ದುದರಿಂದ ಸರಕಾರದವರು ಆ ಯೋಜನೆಯನ್ನೇ ಹಿಂತೆಗೆದುಕೊಂಡು ಬಿಟ್ಟಿರುವರು. ಈ ಸಂಬಂಧದಲ್ಲಿ ಬ್ರಿಟಿಶ್ ಮಂತ್ರಿತ್ರಯರು ಮತ್ತು ವಾಯಿಸರಾಯರು ಪ್ರಕಟಣೆಯೊಂದನ್ನು ಹೊರಡಿಸಿ ಈ ವರೆಗೆ ನಡುಗಾಲ ಸಮ್ಮಿಶ್ರ ಸರಕಾರ ರಚಿಸುವದು ಸಾಧ್ಯವಾಗದ್ದಕ್ಕೆ ವಿಷಾದವ್ಯಕ್ತಪಡಿಸಿದ್ದಾರೆ. ಆದರೆ ಜೂನ ೧೬ ರ ಪ್ರಕಟನೆಯ ೮ ನೇ ಪ್ಯಾರಾಕ್ಕನುಗುಣವಾಗಿಪುವದಾಗಿ ಸಾರಿರುವರು. ಈ ೮ ನೇ ಪ್ಯಾರಾದಲ್ಲಿ ಈ ರೀತಿ ಹೇಳಲಾಗಿದೆ. ಈ ಸಂಯುಕ್ತ ಸರಕಾರದಲ್ಲಿ ಪ್ರಮುಖ ರಾಜಕೀಯ ಪಕ್ಷಗಳೆರಡೂ ಅಥವಾ ಅವುಗಳಲ್ಲಿ ಯಾವದೊಂದು ಪಕ್ಷವು ಸೇರಲೊಪ್ಪದಿದ್ದರೆ ಬ್ರಿಟಿಶ್ ರಾಯಭಾರದ ಮೇ ೧೬ ರ ಘೋಷಣೆಯನ್ನು ಒಪ್ಪುವಂಥವರಿಂದ ಅದಷ್ಟು ಹೆಚ್ಚು ಪ್ರಾತಿನಿಧಿಕವಾದ ನಡುಗಾಲ ಸರಕಾರವನ್ನು ವಾಯಿಸರಾಯರು ಮುಂದೆ ಸಾಗಿಸುವ ಪ್ರಯತ್ನವನ್ನು ವಾಯಿಸರಾಯರು ಮುಂದೆ ಸಾಗಿಸುವ ಇಚ್ಛೆಯುಳ್ಳವರಾಗಿದ್ದಾರೆಂದು ಉಲ್ಲೇಖಿಸಲಾಗಿದೆ. ಈ ಹೊಸ ನಡುಗಾಲ ಸರಕಾರ ಸ್ಥಾಪಿತವಾಗುವ ವರೆಗೆ ಹಿಂದುಸ್ತಾನ ಸರಕಾರವನ್ನು ಸ್ಥಾಪಿಸಿಕೊಂಡು ಹೋಗಬೇಕಾದ್ದರಿಂದ ಅಧಿಕಾರಿಗಳ ತಾತ್ಪೂರ್ತಿಕ ಜೋಪಾಸನಾ ಸರಕಾರ ನಿರ್ಮಿಸುವದು ವಾಯಿಸರಾಯರ ಇಚ್ಛೆಯಿದೆಂದು ಅವರು ಉಲ್ಲೇಖಿಸಿರುವರು. ಘಟನಾ ರಚನೆಯು ಇನ್ನು ಎರಡು ಮುಖ್ಯ ಪಕ್ಷಗಳ ಮತ್ತು ಸಂಸ್ಥಾನಗಳ ಒಪ್ಪಿಗೆಯಿಂದ ಮುಂದೆ ಸಾಗಬಲ್ಲದೆಂಬದಕ್ಕೆ ಸಂತೋಷ ಪ್ರದರ್ಶಿಸಿರುವರು. ಈ ರೀತಿ ಇಲ್ಲಿನ ಕಾರ್ಯವನ್ನು ಮುಗಿಸಿಕೊಂಡು ಮಂತ್ರಿತ್ರಯರು ಇದೇ ಶನಿವಾರ ಸ್ವದೇಶಕ್ಕೆ ಮರಳಿ ಇಲ್ಲಿನ ಘಟನೆಗಳನ್ನೆಲ್ಲ ಮುಖ್ಯ ಮಂತ್ರಿ ಅಟ್ಲಿಯವರಿಗೆ ಮತ್ತು ಮಂತ್ರಿಮಂಡಲಕ್ಕೆ ತಿಳಿಸಲಿರುವರು.

### ಕಾಂಗ್ರೆಸ ವರಿಷ್ಠರ ಸಲಹೆ

ಕಾಂಗ್ರೆಸ್ಸು ಇಂತು ಘಟನಾ ಸಮಿತಿಯಲ್ಲಿ ಸೇರಲು ನಿರ್ಧರಿಸಿದ್ದರಿಂದ ಸಮಿತಿಯ ಸದಸ್ಯರನ್ನೆಂತು ಆರಿಸಬೇಕೆಂಬ ಬಗ್ಗೆ ಆಯಾ ಪ್ರಾಂತಿಕ ಮಂತ್ರಿಮಂಡಲಗಳಿಗೆ ಸಲಹೆ ಕೊಟ್ಟಿರುವರು. ಜುಲೈ ೬....೭ ಕ್ಕೆ ಮುಂಬಯಿಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಕಮೀಟಿಯನ್ನು ಕರೆಯಲೂ ನಿರ್ಧರಿಸಿರುವರು. ಈ ಘಟನಾ ಸಮಿತಿಯಲ್ಲಿ ಮಹಾತ್ಮಾ ಗಾಂಧಿಯವರು ಸದಸ್ಯರಾಗುಳಿಯದಿದ್ದರೂ ತಮ್ಮ ಸಂಪೂರ್ಣ ಅಶೀರ್ವಾದವನ್ನು ಅವರು ದಯಪಾಲಿಸಿದ್ದಾರೆ. ಕಾಂಗ್ರೆಸ ವರ್ಕಿಂಗ ಕಮೀಟಿಯ ಎಲ್ಲ ಸದಸ್ಯರಿಗೆ ಈ ಸಮಿತಿಯಲ್ಲಿ ಅವಕಾಶ ಕಲ್ಪಿಸಿ ಕೊಡಲಾಗಿದೆ. ರಾಷ್ಟ್ರಾಧ್ಯಕ್ಷ ಅಬುಲ್ ಕಲಂ ಅಜಾದ ಮತ್ತು ಖಾನ ಅಬ್ದುಲ್ ಗಫರಖಾನರು ಸರಹದ್ದದಿಂದ, ಸರದಾರ ವಲ್ಲಭಭಾಯಿ ಮತ್ತು ಶಂಕರರಾವ ದೇವ ಇವರು ಮುಂಬಯಿಯಿಂದ, ಡಾ. ಪಟ್ಟಾಭಿ ಸೀತಾರಾಮಯ್ಯ ಮತ್ತು ರಾಜಾಜಿ ಮದ್ರಾಸದಿಂದ, ಪಂ. ಜವಾಹರಲಾಲ, ಪಂಡಿತ ಗೋವಿಂದ ವಲ್ಲಭಪಂತ ಮತ್ತು ಕೃಪಲಾನಿಯವರು ಯುಕ್ತಪ್ರಾಂತದಿಂದ, ಬಾಬೂ ರಾಜೇಂದ್ರ ಪ್ರಸಾದ ಮತ್ತು ಸರೋಜಿನಿ ನಾಯಡು ಬಿಹಾರದಿಂದ, ಅಸಫಅಲ್ಲಿ ದಿಲ್ಲಿಯಿಂದ, ಜಯರಾಮದಾಸ ದೌಲತರಾಮ ಸಿಂಧದಿಂದ, ಮತ್ತು ಶರಚ್ಚಂದ್ರ ಬೋಸ ಹಾಗು ಡಾ. ಪ್ರಫುಲ್ಲ ಘೋಷರು ಬಂಗಾಲದಿಂದ ಆರಿಸಲ್ಪಡುವರು. ಮದ್ರಾಸದಿಂದ ಸರ್ ಎನ್. ಗೋಪಾಲಸ್ವಾಮಿ ಅಯ್ಯಂಗಾರ, ಸರ್ ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ, ಬಿ. ಶಿವರಾವ, ಕೆ. ಸಂತಾನಂ, ಅಮ್ಮು ಸ್ವಾಮಿನಾಥನ್ ಮತ್ತು ಶ್ರೀಮತಿ ಕಮಲಾದೇವಿಯವರೂ ಆರಿಸಲ್ಪಡಲಿರುವರು. ಇಬ್ಬರು ಹಿಂದೀ ಕ್ರಿಶ್ಚನ್‌ರು, ಒಬ್ಬ ಅಂಗ್ಲೊ-ಇಂಡಿಯನ್‌ರನ್ನೂ ಮದ್ರಾಸ ಪ್ರಾಂತವು ಆರಿಸಲಿರುವದು. ಮುಂಬಯಿಯಿಂದ ಒಬ್ಬಿಬ್ಬ ಪಾರ್ಸಿಗಳು ಆರಿಸಲ್ಪಡುವ ಸಂಭವವಿದೆ. ಅವರಲ್ಲಿ ಎಂ. ಅರ್. ಮಸಾನಿಯವರೊಬ್ಬರಾಗುವರು. ಡಾ. ಎಂ. ಅರ್. ಜಯಕರ, ಕೆ. ಎಂ. ಮುನಸಿ ಮತ್ತು ಇಬ್ಬರು ಮೂವರು ಅರ್ಥಿಕ ಮತ್ತು ಹಣಕಾಸಿನ ತಜ್ಞರನ್ನಾರಿಸಲಾಗುವದು. ಯುಕ್ತಪ್ರಾಂತದಿಂದ ಸರ್ ಎಸ್. ರಾಧಾಕೃಷ್ಣನ್, ಸರ್ ತೇಜಬಹಾದ್ದೂರ ಸಪ್ರು (ಅವರು ಚುನಾವಣೆಗೆ ನಿಲ್ಲಲು ಒಪ್ಪಿದರೆ), ಪಂಡಿತ ಹೃದಯನಾಥ ಕುಂಜರು ಮತ್ತು ಇನ್ನು ಒಬ್ಬಿಬ್ಬರು ಕಾಂಗ್ರೆಸ್ಸೇತರ ಧುರೀಣರು ಆರಿಸಲ್ಪಡುವರು.

### ಅಗಸ್ಟ ೧೦ ರಿಂದ ಘಟನಾಸಮಿತಿ

ಆಯಾ ಪ್ರಾಂತಿಕ ಶಾಸನ ಸಭೆಗಳು ಕೂಡಿ ಘಟನಾ ಸಮಿತಿಯ ಸದಸ್ಯರನ್ನಾರಿಸಬೇಕಾದ್ದರಿಂದ ಇಡೀ ಜುಲೈ ತಿಂಗಳ ಕಳೆದುಹೋಗಬಹುದು. ಅಗಸ್ಟ ೧೦ ರಿಂದ ಘಟನಾ ಸಮಿತಿಯ ಸಭೆ ಪ್ರಾರಂಭವಾಗಬಹುದು. ಹೊಸದಿಲ್ಲಿಯಲ್ಲಿರುವ ಕೌನ್ಸಿಲ್ ಭವನದ ಲಾಯಬ್ರರಿಯಲ್ಲಿ ಘಟನಾ ಸಮಿತಿಯ ೪೦೦ ಜನರ ಸಭೆಯ ಬಗ್ಗೆ ವ್ಯವಸ್ಥೆ ಮಾಡಲು ೩ ಲಕ್ಷ ರೂಪಾಯಿಗಳು ವೆಚ್ಚಮಾಡಲು ಅಪ್ಪಣೆ ವಿಧಿಸಲಾಗಿದೆಂದು ತಿಳಿಯುತ್ತದೆ. ಈಗ ಕೇಂದ್ರ ಶಾಸನ ಸಭಾಸದಸ್ಯರಿಗೆ ಕೊಡಲಾಗುತಿರುವ ೩೦ ರೂಪಾಯಿ ದೈನಂದಿನ ಭತ್ತೆಯನ್ನು ಘಟನಾಸಮಿತಿಯ ಸದಸ್ಯರಿಗೆ ಕೊಡಲಾಗುವದು. ಸಭಾಸದರ ವಸತಿ ಮತ್ತು ಯೋಜನಾ ಸೌಕರ್ಯವನ್ನು ತಿರುವಾಂಕೂರ ಹಾಗೂ ಕರ್ಜನ್ ಭವನಗಳಲ್ಲಿ ಮಾಡಲಾಗಿದೆ. ಅದಕ್ಕಾಗಿ ದಿನಕ್ಕೆ ೧೦ ರೂಪಾಯಿ ಕೊಡಬೇಕಾಗುವದು. ಘಟನಾಸಮಿತಿಯ ಕಾರ್ಯಕಲಾಪಗಳು ಗುಪ್ತವಾಗಿ ನಡೆಯುವವು. ಕಾರ್ಯಕಲಾಪಗಳ ಸರಕಾರಿ ದಾಖಲೆ ಸಹ ಇಡಲ್ಪಡುವ ಸಂಭವವಿಲ್ಲ. ಈ ಸಂಬಂಧದಲ್ಲಿ ಕಾನಡಾದ ಘಟನಾ ಸಮಿತಿಯ ಕಾರ್ಯಕಲಾಪಗಳು ಅನೇಕ ವರ್ಷಗಳ ವರೆಗೆ ಗುಪ್ತವಾಗಿಯೆ ಇಡಲ್ಪಟ್ಟಿದ್ದವೆಂದೂ ಸಭಾಸದರು ಮತಭೇದಗಳನ್ನು ಹೋಗಲಾಡಿಸಿಕೊಂಡು ಒಡಂಬಡಿಕೆಗೆ ಬರಲು ಮೂರು ದಿವಸ ಅವರನ್ನು ಪರಿಷತ್ತಿನ ಕೋಣೆಯಲ್ಲಿ ಕೀಲಿ ಹಾಕಿ ಇಡಲಾಗಿತ್ತೆಂದೂ ಹೇಳಲಾಗುತ್ತದೆ. ಈ ರೀತಿಯಾಗಿ ಘಟನಾ ಸಮಿತಿಯ ಸಿದ್ಧತೆ ಭರದಿಂದ ಸಾಗಿದೆ.





## ದಕ್ಷಿಣ ಆಫ್ರಿಕೆಯಲ್ಲಿ ಹಿಂದೀಯರ ಸತ್ಯಾಗ್ರಹ

### ನಾಯಕ ಮೊದಲಾದವರಿಗೆ ಶಿಕ್ಷೆ

### ಯುಕ್ತರಾಷ್ಟ್ರ ಸಂಸ್ಥೆಗೆ ದೂರು

ಹಿಂದೀಯರನ್ನು ವಿಶಿಷ್ಟ ಪ್ರದೇಶಗಳಿಗೆ ನೇಮಿತವಾಗಿ ಮಾಡುವ ದಕ್ಷಿಣ ಆಫ್ರಿಕೆಯ ಭೂಕಾಯಿದೆಯ ಮೇಲೆ ಗವ್ಹರ್ನರ ಜನರಲ್ಲರ ಹಸ್ತಾಕ್ಷರವಾಗಿ ಅದು ಜಾರಿಗೆ ಬಂದೊಡನೆ ಹಿಂದುಸ್ತಾನ ಸರಕಾರದವರು ಅಲ್ಲಿಟ್ಟಿದ್ದ ಹಾಯಕಮೀಶನರರನ್ನು ಹಿಂದೆ ಕರಿಸಿಕೊಂಡು ತಮ್ಮ ನಿಷೇಧ ವ್ಯಕ್ತಗೊಳಿಸಿದ ನಂತರ ಹಿಂದೀಯರು ಆ ವರ್ಣದ್ವೇಷದ ಕಾಯಿದೆಯ ವಿರುದ್ಧ ಪ್ರತ್ಯಕ್ಷ ಕ್ರಿಯೆಯನ್ನು ಪ್ರಾರಂಭಿಸಿದ್ದಾರೆ. ಅವರ ಕ್ರಿಯೆ ಸವಿನಯ ಕಾಯಿದೆಭಂಗದ ರೂಪ ತಳೆದಿದೆ. ದರ್ಬಾನದಲ್ಲಿ ಕಳೆದ ವಾರ ಅದು ಅರಂಭವಾಯಿತು. ದರ್ಬಾನ ನಗರ ಸಭೆಯ ಪ್ರತಿಬಂಧಿತ ಬಯಲಿನಲ್ಲಿ ಹಿಂದೀ ಸತ್ಯಾಗ್ರಹಿಗಳು ಒಂದು ಡೇರೆ ಹೊಡೆದು ಸತ್ಯಾಗ್ರಹವನ್ನು ಅರಂಭಿಸಿದರು. ದಕ್ಷಿಣ ಅಫ್ರಿಕಾ ಸರಕಾರದವರು ನೇರವಾಗಿ ಭೂಕಾಯಿದೆಯನ್ನೆ ಅವರ ಮೇಲೆ ಪ್ರಯೋಗಿಸಲು ಬಯಸದೆ ೧೮೭೪ ರ ಹಳೆಯ ಬುರುಜು ಬಂದ ಕಾಯಿದೆಯೊಂದನ್ನು ಹೊರತೆಗೆದು ಅದರನ್ವಯ ದರ್ಬಾನ ನಗರ ಸಭಾ ಮೈದಾನದ ೨೫೦ ಚದರ ಗಜ ಪ್ರದೇಶದಲ್ಲಿ ಪ್ರವೇಶಿಸಕೂಡದೆಂದು ನಿರ್ಬಂಧ ಹೇರಿದ್ದರು. ಸತ್ಯಾಗ್ರಹಿಗಳು ಇದನ್ನು ಲೆಕ್ಕಿಸದೆ ಪ್ರತಿಬಂಧಿತ ಪ್ರದೇಶವನ್ನು ಪ್ರವೇಶಿಸಿದರು.

### ಬಿಳಿಯರ ಜುಲುಮೆ

ವರ್ಣದ್ವೇಷದಿಂದ ತಲೆ ಕೆಟ್ಟ ಬಿಳಿಯರನೇಕರು ಈ ಸತ್ಯಾಗ್ರಹಿಗಳ ಮೇಲೆ ದಾಳಿ ಮಾಡಿದರು. ಅವರ ಡೇರೆಗಳನ್ನು ಹರಿದೊಗೆದರು. ಕಳೆದ ಆದಿತ್ಯವಾರ ಅವರು ಮಾಡಿದ ದಾಳಿಯಲ್ಲಿ ಹಲವು ಹಿಂದೀಯರಿಗೆ ಗಾಯವಾಯಿತು. ಆದರೆ ಹಿಂದೀಯರು ಶಾಂತರಾಗಿಯೆ ಇದ್ದರು. ದರ್ಬಾನದ ಅಧಿಕಾರಿಗಳು ಸಂಭಾವಿತರಂತೆ "ಸತ್ಯಾಗ್ರಹಿಗಳ ಗೊಡವೆಗೆ ಹೋಗಬೇಡಿರಿ. ಪೋಲೀಸರು ತಮ್ಮದೇ ಆದ ರೀತಿಯಿಂದ ಅವರ ಸಮಾಚಾರ ತೆಗೆದುಕೊಳ್ಳಲಿ" ಎಂದು ಬಿಳಿಯರಿಗೆ ವಿನಂತಿಸಿಕೊಂಡರು. ಆದರೆ ನಿಶ್ಶಸ್ತ್ರ ನಿರೋಧಕರ ವಿರುದ್ಧ ಈ ಹೀನ ದಾಳಿಯನ್ನು ಕೈಕೊಂಡ ಬಿಳಿಯರನ್ನು ಬಂಧಿಸಲಿಲ್ಲ.

### ಯುರೋಪಿಯನ್ನ ಸತ್ಯಾಗ್ರಹಿ

ಮೈದಾನದಿಂದ ಚದರಿಹೋಗಲು ಪೋಲೀಸರು ಹಿಂದೀಯರಿಗೆ ಆಜ್ಞೆಯಿತ್ತರು. ನೆರೆದಿದ್ದ ದೊಡ್ಡ ಗುಂಪಿನಲ್ಲಿ ಸತ್ಯಾಗ್ರಹಿಗಳು ಹೊರತು ಉಳಿದವರು ಚದರಿಹೋದರು. ಉಳಿದವರನ್ನು ಪೋಲೀಸರು ಬಂಧಿಸಿ ಮ್ಯಾಜಿಸ್ಟ್ರೇಟರ ಮುಂದೆ ನಿಲ್ಲಿಸಿದರು. ಬಂಧಿಸಲ್ಪಟ್ಟವರಲ್ಲಿ ಹೆಂಗಸರು—ಹುಡುಗರು ಕೂಡ ಇದ್ದರು. ಡಾ. ಜಿ. ಎಂ. ನಾಯಿಕರ್, ಎಂ. ಡಿ. ನಾಯಡು, ಮಾಣಿಕ್ಯನ್ ಗೌಡರ ಮೊದಲಾದವರಲ್ಲದೆ ಯುರೋಪಿಯನ್ ಧರ್ಮಾಧಿಕಾರಿಯಾದ ರೆವ್ಹರೆಂಡ ಸ್ಕಾಟರೂ ಸತ್ಯಾಗ್ರಹಿಗಳಲ್ಲಿದ್ದರು.

ಅಪರಾಧಿಗಳ ವಿಚಾರಣೆಯಾದಾಗ ಅರೋಪಿಗಳು ತಪ್ಪು ಒಪ್ಪಿಕೊಂಡರು. ಅದಕ್ಕೆ ಬೇಕಾದ ಶಿಕ್ಷೆಯನ್ನನುಭವಿಸಲು ಸಿದ್ಧರಾಗಿರುವುದಾಗಿಯೂ ಸತ್ಯಾಗ್ರಹಿಗಳು ಸಾರಿದರು. "ನನ್ನ ದೇಶಬಾಂಧವರ ಹಕ್ಕಿನ ಗೌರವ ರಕ್ಷಣೆಗಾಗಿ ನಾನು ಪರಮಾವಧಿ ಶಿಕ್ಷೆಯನ್ನು ಅನುಭವಿಸಲು ಸಿದ್ಧನಾಗಿದ್ದೇನೆ" ಎಂದು ನಾಯಕರು ಕೊಟ್ಟ ಲಿಖಿತ ಹೇಳಿಕೆ. ಅಲ್ಲದೆ "೧೮೭೪ ರ ಕಾಯಿದೆ ಎಷ್ಟು ಅಮಾನುಷವೂ ಅಕ್ಷೇಪಾರ್ಹವೂ ಆಗಿದೆಯೆಂದರೆ ಸರಕಾರದವರು ಅದನ್ನು ಮುರಿದ ಬಗ್ಗೆ ನಮ್ಮನ್ನು ಬಂಧಿಸದೆ ೭೨ ವರ್ಷ ಹಳೆಯ ಕಾಯಿದೆಯನ್ನು ಹೊರಗೆತ್ತಿ ಕಪಟದಿಂದ ನಿಜವಾದ ಪ್ರಶ್ನೆಯನ್ನು ಮೂಲೆಗೊತ್ತಲೆತ್ನಿಸಿದ್ದಾರೆಂ"ದು ಸರಕಾರದ ದೌರ್ಜನ್ಯವನ್ನು ಖಂಡಿಸಿದ್ದಾರೆ. ಶ್ರೀ ನಾಯಕರೇ ಮೊದಲಾದವರಿಗೆ ೭ ದಿನಗಳ ಶಿಕ್ಷೆ ವಿಧಿಸಲಾಯಿತು. ಅದರೆ ೩ ತಿಂಗಳ ವರೆಗೆ ಅದನ್ನು ತಡೆಹಿಡಿಯಲಾಗಿದೆ!



# ಅಂತರ್ ರಾಷ್ಟ್ರೀಯ

### ಬಿಕ್ಕಟ್ಟಿನಲ್ಲಿ ಒಕ್ಕಟ್ಟು

ಪ್ಯಾರೀಸಿನ ಲಕ್ಸೆಂಬರ್ಗ ಅರಮನೆಯಲ್ಲಿ ಯುರೋಪಿನ ಭವಿತವ್ಯ ನಿರ್ಣಯಕ್ಕಾಗಿ ನೆರೆದ ಚತುರ್‌ರಾಷ್ಟ್ರ ವಿದೇಶಮಂತ್ರಿಗಳು ಮತ್ತೊಂದು ವಾರದ ವಿಚಾರವಿನಿಮಯದ ನಂತರವೂ ಬಹಳ ಮುಂದುವರಿಯಲಿಲ್ಲ. ಕಳೆದ ಬಾರಿಯ ಅಧಿವೇಶನದಂತೆ ಇದು ಕಿಡಿ ಹಾರುವ ಅಧಿವೇಶನವಾಗಿ ಇನ್ನೂ ರೂಪುಗೊಂಡಿಲ್ಲ. ಆದರೆ ಮಂತ್ರಿಚತುಷ್ಟಯರು ಬಿಕ್ಕಟ್ಟಿನಲ್ಲಿ ಒಂದು ಒಕ್ಕಟ್ಟು ತೋರಿಸಿರುವರೆಂದು ಹೇಳಿದರೆ ತಪ್ಪಾಗದು. ಇಟಲಿಯ ಮೇಲೆ ಹೊರಿಸಬೇಕಾದ ಶಾಂತಿ ಒಪ್ಪಂದದ ಕರಾರುಗಳ ಬಗೆಗೆ ಇನ್ನೂ ಏನೂ ನಿರ್ಣಯವಾಗಿಲ್ಲ—ಆದರೆ ಇದೇ ಶುಕ್ರವಾರಕ್ಕೆ ಮುಂಚಿತವಾಗಿ ಒಪ್ಪಂದದ ಕರಡನ್ನು ಸಿದ್ಧಗೊಳಿಸಲೇಬೇಕೆಂದು ಅವರೆಲ್ಲರೂ ಒಪ್ಪಿದ್ದಾರೆ. ಅದು ಎಷ್ಟು ಮಟ್ಟಿಗೆ ಕಾರ್ಯಕಾರಿಯಾಗುವದೋ ಹೇಳಲಾಸಲ್ಲ, ಇಟಲಿಯ ವಸಾಹತುಗಳನ್ನು ಯಾವ ಪ್ರಕಾರ ವ್ಯವಸ್ಥಿತಗೊಳಿಸಬೇಕೆಂದು ಬಗೆಹರಿಸಿಕೊಳ್ಳಲಾರದೆ ಆ ಪ್ರಶ್ನೆಯ ತೀರ್ಮಾನವನ್ನು ಒಂದು ವರ್ಷ ಮುಂದೆ ಹಾಕಲು ಒಮ್ಮತದಿಂದ ನಿರ್ಣಯಿಸಲಾಯಿತು. ಈ ನಡುವೆ ಇಟಲಿ ಈ ವಸಾಹತುಗಳ ಮೇಲಿನ ಹಕ್ಕನ್ನು ಬಿಟ್ಟುಕೊಡುವದಾಗಿ ಜಾಹೀರ ಪಡಿಸಬೇಕೆಂದು ಸೂಚಿಸಲಾಗಿದೆ. ಮುಂದಿನ ಒಂದು ವರ್ಷದ ಅವಧಿಯಲ್ಲಿ ಪರಿಸ್ಥಿತಿ ತಮಗೇ ಅನುಕೂಲವಾಗುವದೆಂದು ನಾಲ್ವರೂ ಬಗೆದಿರಬೇಕೆಂದು ತೋರುತ್ತದೆ. ಈ ನಡುವೆ ಆ ವಸಾಹತುಗಳು ತಮ್ಮ ಪ್ರಜಾತಂತ್ರಾತ್ಮಕ ಹಕ್ಕನ್ನೂ ಸಾಧಿಸಿಕೊಳ್ಳಲಾರದೆ, ಇಟಲಿಯ ಅಧೀನತೆಯಲ್ಲಿಯೂ ಇರುವ ನಿರ್ಧಾರವಿಲ್ಲದೆ ತ್ರಿಶಂಕುಗಳಾಗಿರಬೇಕು. ಇನ್ನು ಟ್ರೀಸ್ಟ ಬಂದರದ ಸ್ವಾಮಿತ್ವಕ್ಕಾಗಿ ಇಟಲಿ-ಯುಗೊಸ್ಲಾವಿಯಾಗಳಲ್ಲಿರುವ ವಿವಾದವನ್ನು ತೀರ್ಮಾನಿಸುವದು ಸಾಧ್ಯವಾಗಿಲ್ಲ. ಅಮೇರಿಕನ್ ವಿದೇಶ ಮಂತ್ರಿ ಬಾಯನ್ಸ್‌ರು ಆ ಬಂದರವನ್ನು ಅಂತರ್ ರಾಷ್ಟ್ರೀಯ ಅಡಳಿತೆಯಲ್ಲಿಡಬೇಕೆಂದು ಮಾಡಿದ ಹೊಸ ಸೂಚನೆಯ ಚರ್ಚೆ ನಡೆದಿದೆ. ಸಂಗಡಲೇ ಯಾವುದೇ ಪಕ್ಷದಿಂದ ಏಕಪಾಕ್ಷಿಕ ಅತಿಕ್ರಮ ನಡೆಯದಂತೆ ತಡೆಯಲು ಅಂಗ್ಲೋ—ಅಮೇರಿಕನ್ನರ ಯುದ್ಧ ಹಡಗಗಳು ಆ ಬಂದರದ ಹತ್ತಿರ ಲಂಗರು ಹಾಕಿವೆ. ಇಟಲಿ—ಫ್ರಾನ್ಸಗಳೊಳಗಿನ ಗಡಿ ವಿವಾದವೂ ಬಗೆಹರಿದಿಲ್ಲ. ಬಗೆಹರಿದ ಒಂದೇ ಒಂದು ವಿವಾದವೆಂದರೆ ಅಸ್ಟ್ರಿಯಾ—ಇಟಲಿ ಗಡಿಯದು. ಇಟಲಿಯ ವಶದಲ್ಲಿದ್ದ ಒಂದು ಚಿಕ್ಕ ಅಂಶದ ಮೇಲೆ ಅಸ್ಟ್ರಿಯಾ ಇಟ್ಟಿದ್ದ ಬೆರಳನ್ನು ಮಹಾ ಚತುರ್‌ರಾಷ್ಟ್ರೀಯರು ಮನ್ನಿಸದೆ ಇಟಲಿಗನುಕೂಲವಾಗಿ ತೀರ್ಮಾನವಿತ್ತರು. ತಮ್ಮತಮ್ಮಲ್ಲಿ ಉಂಟಾದ ಭಿನ್ನಾಭಿಪ್ರಾಯಗಳಿಂದ ಬ್ರಿಟಿಶ ವಿದೇಶ ಮಂತ್ರಿ ಬೆವಿನ್ನರು ಎಷ್ಟು ರೋಸಿ ಹೋಗಿರುವರೆಂದರೆ, ಅವರು "ಈಗ ಭಿನ್ನಾಭಿಪ್ರಾಯವಾಗಿರುವದು ದೊಡ್ಡ ಅಥವಾ ಸಣ್ಣ ವಿಷಯಗಳ ಮೇಲೆಂಬ ಪ್ರಶ್ನೆಯೇ ಇಲ್ಲ. ಇಡೀ ಮಾತುಕತೆಯೇ ಒಂದು ಫಾರ್ಸ ಅಥವಾ ಹಗರಣದಂತಾಗಿದೆ ಎಂದರು.

ಇದರಿಂದ ಎದೆಗುಂದದೆ ಸತ್ಯಾಗ್ರಹಿಗಳು ಒಂದೊಂದೇ ಗುಂಪಾಗಿ ಸತ್ಯಾಗ್ರಹ ಮಾಡಿ ಬಂಧನಕ್ಕೊಳಗಾಗುತಿದ್ದಾರೆ. ಹೋರಾಟವನ್ನು ಮುಂದೆ ಸಾಗಿಸಲು ದಕ್ಷಿಣಾಫ್ರಿಕಾ ಹಿಂದೀ ಕಾಂಗ್ರೆಸ್ಸು ನಿರ್ಧರಿಸಿದೆ.

### ಯುಕ್ತರಾಷ್ಟ್ರ ಸಂಸ್ಥೆಗೆ ದೂರು

ಇತ್ತ ಹಿಂದುಸ್ತಾನ ಸರಕಾರದವರ ಸೂಚನೆಯಂತೆ, ದಕ್ಷಿಣ ಅಫ್ರಿಕೆಯ ೨,೫೦,೦೦೦ ಹಿಂದೀಯರ ವಿರುದ್ಧ ಅಲ್ಲಿಯ ಸರಕಾರ ಪಕ್ಷಪಾತ ನಡೆಸಿದೆಯೆಂಬ ದೂರನ್ನು ಸರ್ ರಾಮಸ್ವಾಮಿ ಮುದಲಿಯಾರರು ಯುಕ್ತರಾಷ್ಟ್ರ ಸಂಸ್ಥೆಯ ಕಾರ್ಯದರ್ಶಿ ಟ್ರಿಗ್ವೇಲಿಯವರಿಗೆ ಸಾದರ ಪಡಿಸಿದ್ದಾರೆ.

### ಇಟಲಿಯ ಎಚ್ಚರಿಕೆ

ಈ ಪರಿಸ್ಥಿತಿಯಿಂದ ಇಟಲಿಯ ಹೊಸ ಪ್ರಜಾರಾಜ್ಯ ಸರಕಾರದ ದಿಟ್ಟತನ ಹೆಚ್ಚಿದೆ. ಇಟಲಿಯ ಮಂತ್ರಿಮಂಡಲ ಸರ್ವಾನುಮತದಿಂದ ಪಾಸು ಮಾಡಿದ ಒಂದು ಗೊತ್ತುವಳಿಯಲ್ಲಿ, ಇಟಾಲಿಯನ ಸರಕಾರ ಅಂಗೀಕರಿಸಲಾರದಂಥ ಒಪ್ಪಂದ ಕರಾರುಗಳನ್ನು ಮಿತ್ರರು ಹೊರಿಸುವದಿಲ್ಲೆಂದೆ ಆಶಿಸುತ್ತೇವೆ, ಎಂಬದಾಗಿ ಎಚ್ಚರಿಸಲಾಗಿದೆ. ಎಂದರೆ ಮಿತ್ರರ ಕರಾರುಗಳನ್ನು ಪರಾಜಿತ ಇಟಲಿ ನಿರಾಕರಿಸುವ ಎದೆಗಾರಿಕೆ ತೋರಿಸಬಹುದೆಂದಾಯಿತು! ಟ್ರೀಸ್ಟದ ಪ್ರಶ್ನೆಯಲ್ಲಿಯೂ ಇಟಾಲಿಯನ್ನರು ಹಿಂದೆಂದಿಗಿಂತ ಬಿಕ್ಕಟ್ಟು ತೋರುತಿದ್ದಾರೆ. ಮಾಸ್ಕೋದ ಒಲವನ್ನು ಲೆಕ್ಕಿಸದೆ ಕಮ್ಯುನಿಸ್ಟರು ಕೂಡ ಈ ವಿಷಯದಲ್ಲಿ ಗಸ್ಪೇರಿಯ ಸರಕಾರಕ್ಕೆ ಬೆಂಬಲವಿತ್ತಿರುವರು.

ಯುರೋಪಿಯನ ಶಾಂತಿ ತಡವಾಗುತ್ತ ಹೋಗುತಿರುವದನ್ನು ನೋಡಿ ಜನರಲ್ ಸ್ಮಟ್ಸರಂಥ ಸಾಮ್ರಾಜ್ಯದ ಆಧಾರಸ್ತಂಭಗಳು ಅಧೀರರಾಗತೊಡಗಿದ್ದಾರೆ. ರಶಿಯಾದ ವಿರೋಧವಿದ್ದರೂ ಗಮನಿಸದೆ ಉಳಿದ ರಾಷ್ಟ್ರಗಳ ಶಾಂತಿ ಪರಿಷತ್ತನ್ನು ಕೂಡಿಸಿ ಮುಗಿಸಬೇಕೆಂದು ಅವರ ಹೇಳಿಕೆ. ಬ್ರಿಟಿಶ ಸಾಮ್ರಾಜ್ಯ ಹಿಂದಿನಂತೆ ಈಗ ಪ್ರಥಮ ವರ್ಗದ ರಾಷ್ಟ್ರವಾಗಿಲ್ಲ. ನಾವು ನಮ್ಮ ಆತ್ಮರಕ್ಷಣೆಯ ಹೊಣೆಯನ್ನು ಹೆಚ್ಚಾಗಿ ಹೊರಬೇಕಾಗಿದೆಯೆಂದು ಅವರು ದಕ್ಷಿಣ ಅಫ್ರಿಕಾ ಪಾರ್ಲಿಮೆಂಟಿನಲ್ಲಿ ಹೇಳಿದರು. ಯುರೋಪಿನಲ್ಲಿ ಪುನಃ ಬಲಿಷ್ಠ ಜರ್ಮನಿಯನ್ನು ಕಟ್ಟುವ ಪ್ರಯತ್ನ ಬ್ರಿಟಿಶ ಚಾಲನೆಯಿಂದ ಆರಂಭವಾಗಿದೆ. "ಹಿಂದುಸ್ತಾನದಲ್ಲಿ ಯುರೋಪಿಗಿಂತ ಹೆಚ್ಚು ಒಗ್ಗಟ್ಟಿಲ್ಲ" ವೆಂಬದಾಗಿ ಚರ್ಚಿಲ್ಲರು ಕೆಲವಾರದ ಹಿಂದೆ ಹೇಳಿದ್ದರು. ಅದನ್ನು ತಿರುಗಿಸಿ "ಯುರೋಪಿನಲ್ಲಿ ಹಿಂದುಸ್ತಾನಕ್ಕಿಂತ ಹೆಚ್ಚು ಒಗ್ಗಟ್ಟಿಲ್ಲ"ವೆನ್ನುವ ಕಾಲ ಬಂದಿದೆ.

### ಫ್ರಾಂಕೋನ ಸುದೈವ

ನನೆಗುದಿಗೆ ಬಿದ್ದ ಸ್ಪೇನದ ಪ್ರಶ್ನೆಯನ್ನು ಯುಕ್ತರಾಷ್ಟ್ರ ಭದ್ರತಾಮಂಡಲದವರು ಇನ್ನೂ ಬಗೆಹರಿಸಲಾರದೆ ಹೋಗಿದ್ದಾರೆ. ಈ ವಾರ ಪೋಲಂಡದ ಡಾ. ಲಾಂಗರು ತಿಂಗಳುಗಟ್ಲೆ ಹಳೆಯ ತಮ್ಮ "ಸ್ಪೇನದ ಸಂಬಂಧವನ್ನು ಯುಕ್ತರಾಷ್ಟ್ರ ಸದಸ್ಯರು ಕಡಿದುಕೊಳ್ಳಬೇಕು" ಎಂಬ ಗೊತ್ತುವಳಿಯನ್ನು ಮುಂದಿಸಿದಾಗ ಅದು ನಾಲ್ಕು ವಿರುದ್ಧ ಏಳು ಮತಗಳಿಂದ ತಿರಸ್ಕೃತವಾಯಿತು. ಫ್ರಾನ್ಸ, ಸೋವಿಯೆಟ್, ಪೋಲಂಡ ಮತ್ತು ಮೆಕ್ಸಿಕೋ ಮಾತ್ರ ಅನುಕೂಲ ಮತವಿತ್ತವು. ಲಾಂಗರು ಮತ್ತೂ ಪ್ರಯತ್ನ ಬಿಡದೆ, ಈ ಗೊತ್ತುವಳಿ ಸೆಪ್ಟೆಂಬರ ೧ ರ ವರೆಗೆ ಭದ್ರತಾಮಂಡಲದ ವಿಷಯನಿಯಾಮಿಕೆಯಲ್ಲಿರಬೇಕೆಂದೂ ಆ ವರೆಗೆ ಸ್ಪೇನದ ಜನರಿಗೆ ಫ್ರಾಂಕೋನನ್ನು ಕಿತ್ತೊಗೆಯಲು ಅವಕಾಶ ಕೊಡಬೇಕೆಂದೂ ಸೂಚಿಸಿದ್ದಾರೆ. ಇದಕ್ಕೂ ಬ್ರಿಟಿಶರ ಅಕ್ಷೇಪವಿದೆ. ಈ ವಿಷಯ ಇನ್ನೂ ನಿರ್ಣಯವಾಗಿಲ್ಲ. ಫ್ರಾಂಕೋನ ಹಣೆಬರಹ ಇನ್ನೂ ಚನ್ನಾಗಿಯೆ ಇರುವಂತೆ ಕಾಣುತ್ತದೆ.

### ಹೊಸ ಫ್ರೆಂಚ ಸರಕಾರ

ಡಿಗಾಲೆಯ ಎಂ ಅರ್ ಪಿ ಪಕ್ಷಕ್ಕೆ ಚುನಾವಣೆಯಲ್ಲಿ ದೊರೆತ ವಿಜಯದೊಡನೆ ಫ್ರೆಂಚ ರಾಜಕಾರಣದಲ್ಲಿ ಒದಗಿ ಬಂದಿದ್ದ ಒಂದು ಬಗೆಯ ಬಿಕ್ಕಟ್ಟು ಇದೀಗ ಬಗೆಹರಿದದ್ದು ಎಂ. ಅರ್. ಪಿ. ಯ ವಿಜಯವೇ ಸರಿ. ಪ್ರಬಲಮಂತ್ರಿಮಂಡಲ ರಚನೆಗೆ ಅಡ್ಡಗಾಲು ಹಾಕಲು ಪ್ರಯತ್ನಿಸಿದ ಕಮ್ಯುನಿಸ್ಟ ಪಕ್ಷ ಕೊನೆಗೆ ಮೆತ್ತಗಾಗಿ ಸರಕಾರದಲ್ಲಿ ಭಾಗವಹಿಸಲು ಒಪ್ಪಿತು. ಮಂತ್ರಿಮಂಡಲದ ಅಧ್ಯಕ್ಷರಾಗಿ ಆರಿಸಲ್ಪಟ್ಟ ಹಿಂದಿನ ವಿದೇಶಮಂತ್ರಿ ಜಾರ್ಜ ಬಿಡಾಲ್ಟರು ರಚಿಸಿದ ೨೪ ಮಂತ್ರಿಗಳುಳ್ಳ ಸರಕಾರದಲ್ಲಿ ಐವರು ಕಮ್ಯುನಿಸ್ಟರಿಗೆ ಸ್ಥಾನ ಸಿಕ್ಕಿದ್ದು, ಅಸ್ತ್ರ-ಶಸ್ತ್ರ, ಕೂಲಿಕಾರ, ಉದ್ದಿಮೆಗಳೇ ಮೊದಲಾದ ಕೆಲ ಮಹತ್ವದ ಮಂತ್ರಿಸ್ಥಾನಗಳು ಅವರಿಗೆ ಕೊಡಲ್ಪಟ್ಟಿವೆ. ಎಂ. ಅರ್ ಪಿ. ಪಕ್ಷದ ಬಿಡಾಲ್ಟರು ವಿದೇಶ ಮಂತ್ರಿತ್ವವನ್ನು ಇಟ್ಟುಕೊಂಡಿದ್ದಾರೆ. ಇನ್ನು ದ್ವಿ-ಶಾಸನ ಸಭೆಯು ತಳಹದಿಯುಳ್ಳ ಘಟನಾ ಸಮಿತಿ ಘಟನೆಯನ್ನು ಎರಕ ಹೊಯ್ಯುತಿರುವಾಗ ಈ ೨೪ ಜನರು ರಾಜ್ಯವಾಳುವರು.

ಎಂ. ಅರ್. ಪಿ. ಅಥವಾ ಕೆಥೋಲಿಕ ಪಕ್ಷದ ಈ ವಿಜಯದಿಂದ ರಾಜಕಾರಣದಿಂದ ಸಂನ್ಯಾಸ ಪಡೆದ ಡಿಗಾಲೆ ಪುನಃ ರಾಜಕೀಯ ರಂಗದಲ್ಲಿ ಕಾಣಿಸಿಕೊಳ್ಳುವಂತೆ ತೋರುತ್ತದೆ. ಮುಂಬರುವ ರಾಷ್ಟ್ರಾಧ್ಯಕ್ಷ ಚುನಾವಣೆಯಲ್ಲಿ ಅವರು ಹುರಿಯಾಳಾಗುವ ಸಂಭವವಿದೆ.

### ಮುಫ್ತಿ ಪ್ರತ್ಯಕ್ಷನಾದ

ಜೆರುಸಲೇಮದ ಹಿಂದಿನ ಮುಫ್ತಿ ಹುಸೇನಿ, ಫ್ರೆಂಚ ಸೆರೆಮನೆಯೊಂದರಿಂದ ಹಠಾತ್ತಾಗಿ ಕಣ್ಮರೆಯಾಗಿ ಬ್ರಿಟಿಶ ಸ್ಕಾಟ್ಲಂಡ ಯಾರ್ಡ ಪೋಲೀಸರನ್ನು ಚಳವಿಚಳಗೊಳಿಸಿದವನು ಅವರ ಕೈಗೆ ಸಿಕ್ಕದೆ ಇಜಿಪ್ತದಲ್ಲಿ ಆಶ್ರಯ ಪಡೆದಿದ್ದಾನೆಂದು ಗೊತ್ತಾಗಿದೆ. ಇಜಿಪ್ತದ ಅರಸ ಫರೂಕ ಅವನಿಗೆ ರಾಜಕೀಯ ಶರಣಾಗತನೆಂದು ಆಶ್ರಯ ದಯಪಾಲಿಸಿದ್ದಾನೆ. ಬ್ರಿಟಿಶರು, ಮುಖ್ಯವಾಗಿ ಚರ್ಚಿಲ್ ಪ್ರಭೃತಿಗಳು, ಇದರಿಂದ ಬಹಳ ಅಸಂತುಷ್ಟರಾಗಿದ್ದಾರೆ. ಇದನ್ನು ನೆವಮಾಡಿಕೊಂಡು ಇಜಿಪ್ತವನ್ನು ಪುನಃ ಅಕ್ರಮಿಸಬೇಕೆಂದು ಅವರು ಹೇಳತೊಡಗಿದ್ದಾರೆ. ಆದರೆ ಬ್ರಿಟಿಶ ಸರಕಾರ ಆ ಹವ್ಯಾಸಕ್ಕೆ ಹೋಗದೆ ಮುಫ್ತಿ ಹುಸೇನಿ ಮಧ್ಯಪೂರ್ವ ರಾಜಕಾರಣದಲ್ಲಿ ಕೈಹಾಕುವದಿಲ್ಲೆಂದು ಮಾತು ಕೊಡಬೇಕೆಂದಿಷ್ಟೇ ಕೇಳಿರುವರಂತೆ. ಅಂಥ ಆಶ್ವಾಸನೆ ಬರುವದೋ ಇಲ್ಲವೋ ಹೇಳಲಾಸಲ್ಲ. ಮುಫ್ತಿ ಮಧ್ಯಪೂರ್ವಕ್ಕೆ ಮರಳಿದ್ದರಿಂದ ಪಾಲಿಸ್ತಾನ ಅರಬರ ಸಂಘಟನೆಗೆ ಬಲ ದೊರೆತದ್ದು ನೋಡಿ ಕಿಡಿಕಿಡಿಯಾದ ಯಹೂದ್ಯರ ಅಕ್ರಮ ಮಿಲಿಟರಿ ಸಂಸ್ಥೆ ಅವನಿಗೆ "ಮರಣದಂಡನೆ" ವಿಧಿಸಿದೆಯಂತೆ. ಅವನನ್ನು ಕೊಲ್ಲುವ ಸಾಹಸದಲ್ಲಿ ಅವರು ಇರುವರೆಂದು ತಿಳಿದುಬಂದಿದೆ.

### ಪಾಲಿಸ್ತಾನದಲ್ಲಿ

ಪಾಲಿಸ್ತಾನ ಯಹೂದ್ಯರ ಅಕ್ರಮ ಚಟುವಟಿಕೆಗಳು ಕುಂದದ ಧೈರವತೆಯೊಡನೆ ಸಾಗಿಯೆ ಇವೆ. ಪೂಲುಗಳು ಕೆಡಹಲ್ಪಡುತಿವೆ, ಬಾಂಬುಗಳು ಸ್ಫೋಟವಾಗುತಿವೆ. ಒಬ್ಬ ಬ್ರಿಟಿಶ್ ಸೇನಾಪತಿಯನ್ನೆ ಅಪಹರಿಸಿಕೊಂಡೊಯ್ಯುವ ಪ್ರಯತ್ನ ಕೂಡ ಅವರು ಮಾಡಿದರು. ಕಳೆದ ವಾರ ಅಪಹರಿಸಿಕೊಂಡೊಯ್ದ ೫ ಜನ ಸೇನಾಧಿಕಾರಿಗಳಲ್ಲಿ ಇಬ್ಬರನ್ನು ಬಿಡುಗಡೆ ಮಾಡಿ ಉಳಿದ ಮೂವರನ್ನು ಅವರು "ಜಾಮೀನು ಕೈದಿ" ಗಳಾಗಿ ಇರಿಸಿಕೊಂಡಿದ್ದಾರೆ. ಈಗ ಮಿಲಿಟರಿ ಕೋರ್ಟಿನಲ್ಲಿ ವಿಚಾರಣೆಗೊಳಗಾಗಿರುವ ೩೧ ಜನ ಯಹೂದ್ಯ ಕೈದಿಗಳಲ್ಲಿ ಯಾರಾದರೂ ಗಲ್ಲಿಗೇರಿಸಲ್ಪಟ್ಟರೆ ಈ ಬ್ರಿಟಿಶ ಅಧಿಕಾರಿಗಳ ಮೇಲೆ ಸೇಡು ತೀರಿಸಿಕೊಳ್ಳಲಾಗುವದೆಂದು ಅವರು ಬೆದರಿಸಿದ್ದಾರೆ.

ಮೊನ್ನೆ ಎಪ್ರೀಲದಲ್ಲಿ ಅಕ್ರಮವಾಗಿ ಆಯುಧ ಹಿಡಿದುಕೊಂಡು ಅಡ್ಡಾಡುತಿದ್ದಾಗ ಬಂಧಿಸಲ್ಪಟ್ಟಿದ್ದ ಈ ೩೧ ಜನ ಕ್ರಾಂತಿಕಾರ ಕೈದಿಗಳು ಮೊನ್ನೆ ಬ್ರಿಟಿಶ ಮಿಲಿಟರಿ ಕೋರ್ಟಿನ ಮುಂದೆ ತರಲ್ಪಟ್ಟಾಗ ಆ ನ್ಯಾಯಸ್ಥಾನದ ಅಧಿಕಾರವನ್ನೇ ಧಿಕ್ಕರಿಸಿದರು. ಅವರಲ್ಲಿಬ್ಬರು ದಿಟ್ಟತನದಿಂದ ಹಳೆ ಒಡಂಬಡಿಕೆಯಿಂದ ಕೆಲ ಭಾಗಗಳನ್ನು ಓದಿ ತಮ್ಮ ಕೃತಿಯನ್ನು ನ್ಯಾಯವಾದುದೆಂದು ಸಾಧಿಸಿ ಕೊಂಡರು. ಆ ಭಾಗಗಳಲ್ಲಿ ಯಹೂದ್ಯರ ನಾಡಾದ ಪಾಲಿಸ್ತಾನಕ್ಕೆ ಅವರು ಮುಂದೆ ಮರಳಿದಾಗ ಉಳಿದ ಎಲ್ಲ ಜನಾಂಗಗಳೂ ಅಲ್ಲಿಂದ ಓಡಿಹೋಗುವವೆಂದೂ ಯುಫ್ರೆಟಿಸ ನದಿಯಿಂದ ದೂರ ಸಮುದ್ರದ ವರೆಗಿನ ನಾಡು ನಿಮ್ಮದಾಗುವವೆಂದೂ ದೇವರು ಯಹೂದ್ಯರಿಗೆ ಅಭಯ ಕೊಟ್ಟಿದ್ದುಂಟು! ಆ ಅಭಯವನ್ನೀಗ ಈ ಕ್ರಾಂತಿಕಾರಕ ಯುವಕರು ಕಾರ್ಯಕಾರಿ ಮಾಡಲು ಹೊರಟಿದ್ದರು.

* * *

ಇಂಡೋನೇಶಿಯಾದ ಮುಖ್ಯಮಂತ್ರಿ ಶಹರೀರರು ಡಚ್ಚರ ಸೂಚನೆಗಳಿಗೆ ಪ್ರತಿಯಾಗಿ ಇಂಡೋನೇಶಿಯಾದ ಸ್ವಾತಂತ್ರ್ಯ ತಳಹದಿಯಾದ ಹೊಸ ಸೂಚನೆಗಳನ್ನು ಡಚ್ಚರ ಮುಂದಿಟ್ಟಿದ್ದಾರೆ. ಈಗ ಉಭಯತರ ನಡುವಣ ಸಂಬಂಧ ಮತ್ತಷ್ಟು ಕೆಟ್ಟಿದೆಯೆಂದು ತಿಳಿಯುತ್ತದೆ. ಡಚ್ಚರು ಜಪಾನಿಗಳನ್ನು ಇಂಡೋನೇಶಿಯನ್ನರ ವಿರುದ್ಧ ಉಪಯೋಗಿಸುತಿದ್ದರೆಂದು ಅರೋಪಿಸಲಾಗಿದೆ.

# ಕರ್ನಾಟಕ

## ಧಾರವಾಡ

ಕೆಂಜೋಳ ಬೀಜವನ್ನು ಸರಕಾರದವರು ಈ ತಾಲೂಕಿನಲ್ಲಿ ಶಲವಡಿ ನವಲಗುಂದ ಅಣ್ಣಿಗೇರಿ ಹಾಗು ಶಿರಕೋಳದಲ್ಲಿ ಸಂಗ್ರಹಿಸಿದ್ದಾರೆ. ಅದ್ದರಿಂದ ಆಯಾ ಭಾಗದ ರೈತರು ಅದರ ಲಾಭ ಪಡೆಯಬೇಕಾಗಿ ಪ್ರಸಿದ್ಧಿಸಿದ್ದಾರೆ.

ಉಪ್ಪಿನಬೆಟಗೇರಿಯ ಶ್ರೀ ಬಸವಣ್ಣೆಪ್ಪ ಪುಡಕಲಕಟ್ಟಿಯವರು ೧೯—೬—೪೬ ನೇ ದಿವಸ ಶಿವೈಕ್ಯರಾದರು. ಮರಣ ಕಾಲಕ್ಕೆ ಇವರಿಗೆ ೮೫ ವರ್ಷಗಳಾಗಿದ್ದವು. ಈ ಭಾಗದಲ್ಲಿ ಇವರು ಒಳ್ಳೆ ಪ್ರಮುಖ ವ್ಯಾಪಾರಿಗಳಾಗಿದ್ದರು.

ಕಳೆದ ಜಾಗತಿಕ ಯುದ್ಧದ ರಣಭೂಮಿಯಲ್ಲಿ ಮೃತಪಟ್ಟ ಸೈನಿಕರ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಸಹಾಯವಾಗಬೇಕೆಂದು ಸರಕಾರದವರು ಲೇಡಿ ಲಿನ್‌ಲಿಥ್ಗೊ ಶಿಷ್ಯವೃತ್ತಿ ಏರ್ಪಾಡುಮಾಡಿರುತ್ತಾರೆ. ಇದರ ಲಾಭ ಪಡೆಯಬಯಸುವವರು ಹುಬ್ಬಳ್ಳಿ ದೂಮಲೇದಾರ ಸಾಹೇಬರ ಕಡೆಗೆ ಅರ್ಜಿಮಾಡಿಕೊಳ್ಳಬೇಕು.

ಸೋ. ಸ. ವಿದ್ಯಾವರ್ಧಕ ಸಂಘದ ಸುಧಾರಣ ಸಭೆ ತುಳಜಾಭವಾನಿ ದೇವಾಲಯದಲ್ಲಿ ಸೇರಿತ್ತು. ಅದೇ ಕಾಲಕ್ಕೆ ರಾ.ಸಾ. ಚವ್ಹಾಣರು ಹತ್ತು ಸಾವಿರ ರೂಪಾಯಿ ಕೊಡುವ ಬಗ್ಗೆ ವಾಗ್ದಾನ ಮಾಡಿದರು. ಅಲ್ಲದೆ ಬೇರೆ ಮಹನೀಯರಿಂದ ೫೦೦ ರೂ. ಕಾಣಿಕೆ ಬಂದವು.

ಧಾರವಾಡದ ರೇಶನಿಂಗ ಆಫೀಸರ ಶ್ರೀ ಕಾಟಕರರಿಗೆ ಬೆಳಗಾವಿಗೆ ವರ್ಗವಾಗಿದ್ದರಿಂದ ಅಧಿಕೃತ ಸೀದಾ ಅಂಗಡಿಯವರು ಅವರನ್ನು ಬೀಳ್ಕೊಟ್ಟರು. ಗದಗಿನಲ್ಲಿ ಸೀದಾಧಿಕಾರಿಗಳಾಗಿದ್ದ ಶ್ರೀ ಪುರಾಣಿಕರು ಧಾರವಾಡದ ಸೀದಾಧಿಕಾರಿಗಳಾಗಿ ನೇಮಿಸಲ್ಪಟ್ಟಿರುವರು.

## ಬಳ್ಳಾರಿ

ನಾಟ್ಯಕಲಾ ಪ್ರಪೂರ್ಣ ದಿವಂಗತ ಟಿ. ರಾಘವಾಚಾರ್ಯರಿಗೆ ತಕ್ಕ ಸ್ಮಾರಕವನ್ನು ಮಾಡಬೇಕೆಂದು ಸಮಿತಿಯೊಂದು ನೇಮಿಸಲ್ಪಟ್ಟಿದೆಯಷ್ಟೆ. ಆ ಸಮಿತಿಯವರು ಬಿನ್ನಹ ಪತ್ರಿಕೆಯೊಂದನ್ನು ಹೊರಡಿಸಿ ಕರ್ನಾಟಕ, ಆಂಧ್ರ, ತಮಿಳನಾಡಿನಲ್ಲಿಯ ಮಹಾಜನಗಳು ಈ ಸ್ಮಾರಕ ಕಾರ್ಯಕ್ಕೆ ಮುಕ್ತಹಸ್ತದಿಂದ ಸಹಾಯ ಮಾಡಬೇಕೆಂದು ಕೇಳಿಕೊಂಡಿದ್ದಾರೆ. ಹಣ ಕಳಿಸುವವರು ಸಮಿತಿಯ ಕಾರ್ಯನಿರ್ವಾಹಕರಾದ ಖಾನಸಾಹೇಬ ಅಬ್ದುಲ್ ರಾವುಫ್ ಸಾಹೇಬರ ಹೆಸರಿಗೆ ಕಳಿಸಬೇಕು.

ಬಳ್ಳಾರಿ ವಣಿಕ ಸಂಘದ ಕಾರ್ಯಕಾರಿ ಮಂಡಲದ ಸಭೆ ಸೇರಿ ಕಮರ್ಶಿಯಲ್ ಟ್ಯಾಕ್ಸ ಆಫೀಸರರು ಜನಾಬ ಪಿ. ಸರ್ವರ ಸಾಹೇಬರಿಗೆ ಕೊಟ್ಟ ಅಜ್ಞಾಪತ್ರದಲ್ಲಿ ವರ್ತಕರನ್ನು ಕುರಿತು ಮಾಡಿದ ಆರೋಪಗಳನ್ನು ತೀವ್ರ ನಿಷೇಧಿಸಿ ಅವರನ್ನು ಕೂಡಲೆ ಇಲ್ಲಿಂದ ಸ್ಥಳಾಂತರಿಸಬೇಕೆಂದು ಗೊತ್ತುವಳಿಯಾಯಿತು.

## ಬೆಳಗಾವಿ

ಬೆಳಗಾವಿಯ ಪ್ರಸಿದ್ಧ ವ್ಯಾಪಾರಿಗಳೊಬ್ಬರಲ್ಲಿ ೮೯೬ ಪೆಂಟಿ ಬೆಲ್ಲ ದೊರೆತಿರುವದು. ಇದಲ್ಲದೆ ಇನ್ನೋರ್ವ ವ್ಯಾಪಾರಿಗಳಲ್ಲಿ ಬೆಲ್ಲದ ಸಂಗ್ರಹದ ಜೊತೆಗೆ ಅಕ್ಕಿಯ ಚೀಲವೂ ಒಂದು ದೊರೆತಿದೆ.

ಬೆಳಗಾವಿಯ ಬಿ. ಟಿ. ಕಾಲೇಜಿನ ಪ್ರಿನ್ಸಿಪಾಲರ‍್ಯಾಂಗ್ಲರ ಪಿ. ಎಸ್ ಕಟ್ಟಿಯವರು ನಿವೃತ್ತರಾದ್ದರಿಂದ ಮಧ್ಯಭಾಗದ ಎಜ್ಯುಕೇಶನಲ್ ಇನಸ್ಪೆಕ್ಟರ ವಿ. ಡಿ. ಘಾಟೆಯವರು ಪ್ರಿನ್ಸಿಪಾಲರಾಗಿ ನೇಮಿಸಲ್ಪಟ್ಟಿದ್ದಾರೆ.

ಕೆರೂರಿನ ಗೌಡರಿಂದ ೫೦೦ ರೂಪಾಯಿ ಲಂಚ ತೆಗೆದುಕೊಂಡ ಆರೋಪದ ಮೇಲೆ ಜಾಫರ ಫೌಜದಾರರನ್ನು ಸಸ್ಪೆಂಡ ಮಾಡಲಾಗಿದೆ. ಮುಂದಿನ ವಿಚಾರಣೆ ನಡೆಯಲಿದೆ.

ಬಾಗಲಕೋಟಿಯಲ್ಲಿ ಈಗ ಪೋಲೀಸ ಇನಸ್ಪೆಕ್ಟರರಾಗಿರುವ ಶ್ರೀ ಮಹಮ್ಮದ ಉಮ್ಮರ ಇವರು ಡಿ. ವಾಯ. ಎಸ್. ಪಿ. ಯಾಗಿ ನೇಮಿಸಲ್ಪಟ್ಟಿರುವರೆಂದು ತಿಳಿಯುತ್ತದೆ!!

೧೯೩೯ ನೇ ಇಸ್ವಿಯ ಮೋಟರ ವೀಹಿಕಲ್ಸ ಕಾಯದೆಯನ್ವಯ ೧ ನೇ ಜುಲೈಯಿಂದ ಎಲ್ಲ ಮೋಟರಗಳು ತೃತಿಯಪಕ್ಷದ ಅಪಘಾತದ ವಿರುದ್ಧ ವಿಮೆ ಇಳಿಸುವದನ್ನು ಒತ್ತಾಯದ್ದಾಗಿ ಮಾಡಲಾಗಿದೆಂದು ರೀಜನಲ್ ಟ್ರಾನ್ಸಪೋರ್ಟ ಆಫೀಸರರು ಸಾರಿದ್ದಾರೆ.

## ಉತ್ತರಕನ್ನಡ

ಕಳೆದ ೫ ವರ್ಷಗಳಿಂದ ಕಾರವಾರ ಸಬ್ ಜೇಲಿನಲ್ಲಿ ಸ್ಥಾನಬದ್ಧತೆಯಲ್ಲಿದ್ದ ಅಫಗಾನ ರಾಜವಂಶದ ನಾಲ್ವರು ಹಿಂದುಸ್ಥಾನ ಸರಕಾರದ ಅಪ್ಪಣೆ ಮೇರೆಗೆ ಬೇಗನೆ ಬಿಡಲ್ಪಡುವರೆಂದು ತಿಳಿಯುತ್ತದೆ. ಅವರ ಮೇಲೆ ಕೆಲ ನಿರ್ಬಂಧಗಳನ್ನು ಹಾಕಲಿರುವರೆಂದು ತಿಳಿಯುತ್ತದೆ.

ಕಳೆದ ೯ ನೇ ತಾರೀಕಿನ ದಿನ ಬೆಳ್ಳಿಕೇರಿ ಸಮುದ್ರ ದಂಡೆಯಲ್ಲಿ ತೇಲಿ ಬಂದ ೫ ಇಂಚು ೨೯ ಪೌಂಡಿನ ರಾಕೆಟ ಬಾಂಬನ್ನು ೨೪ ನೇ ತಾರೀಕು ಸ್ಫೋಟ ಮಾಡಿಸಲಾಯಿತು. ಮುಂಬಯಿ ಬಾಂಬ ಕಚೇರಿಯಿಂದ ಓರ್ವರು ಈ ಕೆಲಸಕ್ಕಾಗಿ ಬಂದಿದ್ದರು.

ಹೊಸಾಕುಳಿ ಗ್ರಾಮದ ಅರಕೊಡ್ಲ ಮಜರೆಯಲ್ಲಿ ಎಲ್ಲಿಯೊ ಒಂದು ಕೊಲೆಯಾದ ಸುದ್ದಿ ಬಂದಿದೆ. ಕೊಲೆಗಡಕರು ಶವವನ್ನು ಹಾಗೆಯೆ ಚಲ್ಲಿ ಹೋಗಿದ್ದರಂತೆ. ನರಿ ನಾಯಿಗಳು ಅದನ್ನು ತಿಂದು ಹಾಕಿರುವವಂತೆ. ಪೋಲೀಸರು ಮೃತನ ಹಾಗು ಕೊಲೆಪಾತಕನ ತಪಾಸಣೆ ನಡೆಸಿದ್ದಾರೆ.

ಕಾರವಾರದ ಒಂದು ಅಂಗಡಿಯಲ್ಲಿ ೭॥ ರೂಪಾಯಿ ನಿಯಂತ್ರಿತ ಬೆಲೆಯುಳ್ಳ ಡಾಲ್ಡಾ ಡಬ್ಬಿಯೊಂದನ್ನು ೧೦॥ ರೂ. ಗೆ ಮಾರಿದ ಸುದ್ದಿ, ಮುಂಗೆ ಜಿಲ್ಹಾಧಿಪರ ಶಿಪಾಯಿ ಆ ಅಂಗಡಿಗೆ ಹೋದಾಗ ಡಬ್ಬಿ ಇಲ್ಲೆಂದು ಹೇಳಿದ್ದು ಕಲೆಕ್ಟರರಿಗೆ ಗೊತ್ತಾಗಿ ಅವರೆ ಸ್ವತಃ ಆ ಅಂಗಡಿಗೆ ಡಾಲ್ಡಾ ಕೇಳಲು ಹೋದರಂತೆ. ಅಗಲೂ ಆ ಅಂಗಡಿಕಾರನು ಡಬ್ಬಿಯಿಲ್ಲೆಂದು ಹೇಳಿದನಂತೆ. ಕೂಡಲೆ ಅವರು ಅಂಗಡಿಯನ್ನೆಲ್ಲ ಝಡತಿ ಮಾಡಿ ಇದ್ದ ಡಾಲ್ಡಾ ಡಬ್ಬಿಗಳನ್ನೆಲ್ಲ ಜಪ್ತ ಮಾಡಿ ಖಟ್ಲೆ ಹಾಕಿರುವರೆಂದು ತಿಳಿಯುತ್ತದೆ.

## ವಿಜಾಪುರ

ಮೊನ್ನಿನ ಮಳೆಯಿಂದ ವಿಜಾಪುರ ಜಿಲ್ಲೆಯ ಎರೆ ಭೂಮಿಯಲ್ಲಿಯ ಅಂಕಡೊಂಕು ಒಡ್ಡುಗಳೆಲ್ಲ ಹರಿದು ಹೋದುದನ್ನು ಮುಖ್ಯ ಮಂತ್ರಿ ಖೇರ ಸಾಹೇಬರ ಗಮನಕ್ಕೆ ತರಲಾಗಿ ಅವರು ಆ ಬಗ್ಗೆ ವಿಮರ್ಶಿಸಲಾಗುವುದೆಂದು ಆಶ್ವಾಸನ ಕೊಟ್ಟರೆಂದು ತಿಳಿಯುತ್ತದೆ.

ವಿಜಾಪುರ ಜಿಲ್ಲೆಯ ಬಿಜ್ಜರಗಿ ಗ್ರಾಮದಲ್ಲಿ ಮೂರು ವಾರಗಳ ಹಿಂದೆ ಸರಕಾರಿ ಗೌಡನ ಪೈಕಿ ೬೫೦೦ ರೂಪಾಯಿ ಹಾಗೂ ಇನ್ನಿತರ ರೈತರ ೧೭೦೦ ರೂ. ಈ ರೀತಿ ೮೨೦೦ ರೂಪಾಯಿ ಕಳವಾಗಿದ್ದವು. ಬಿಜ್ಜರಗಿಯಿಂದ ೯ ಮೈಲು ದೂರದಲ್ಲಿದ್ದ ಕೊಟ್ಯಾಳ ಗ್ರಾಮದ ಧೂಳಯ್ಯಾ ಮಠಪತಿ ಎಂಬವನು ಮಧ್ಯರಾತ್ರಿಯಲ್ಲಿ ಒಂಟಿಗನಾಗಿ ಬಂದು ಮಾಳಿಗೆ ಹತ್ತಿ ಮನೆ ಒಡೆದು ಹಣ ಅಪಹರಿಸಿದನೆಂದು ಇದೀಗ ಶೋಧವಾಗಿ ಅಪರಾಧಿಯು ಸೆರೆಯಲ್ಲಿಡಲ್ಪಟ್ಟಿರುವನು. ಈ ಸುದ್ದಿಯನ್ನು ಕೇಳಿ ಅವನ ಹೆಂಡತಿ ಬಾವಿ ಬಿದ್ದಳಂತೆ.

ವಿಜಾಪುರದಲ್ಲಿ ಹೊಸದಾಗಿ ಸ್ಥಾಪಿತವಾದ ಭಾರತೀಯ ರಾಷ್ಟ್ರೀಯ ರಂಗಭೂಮಿಯ ಶಾಖೆಯ ಪರವಾಗಿ ೧೬ ನೇ ತಾರೀಕು ಶ್ರೀ ಸಿದ್ಧೇಶ್ವರ ಹಾಯಸ್ಕೂಲಿನಲ್ಲಿ ಸಭೆ ಸೇರಿ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರು ಭಾರತೀಯ ರಾಷ್ಟ್ರೀಯ ರಂಗಭೂಮಿಯ ಇತಿಹಾಸ ಮತ್ತು ರಾಷ್ಟ್ರೀಯ ರಂಗಭೂಮಿಯ ಕಾರ್ಯಕಲಾಪಗಳನ್ನು ವಿವರಿಸಿದರು.

ಈ ಸಲದ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ವಿಜಾಪುರ ಪಿ. ಡಿ. ಜೆ. ಹಾಯಸ್ಕೂಲಿನಿಂದ ಕುಳಿತವರಲ್ಲಿ ಐವರು ೫೦೦ ಕ್ಕಿಂತ ಹೆಚ್ಚು ಗುಣ ಸಂಪಾದಿಸಿದ್ದರಿಂದ ಪ್ರಿ. ಟಿ. ಕೆ. ಪಾಟೀಲರ ಹಸ್ತದಿಂದ ಅವರಿಗೆ ಪಾರಿತೋಷಕ ಕೊಡಿಸಲಾಯಿತು.

ವಿಜಾಪುರಕ್ಕೆ ಮುಖ್ಯ ಮಂತ್ರಿಗಳು ಬರುವದು ೧೦ ನೇ ತಾರೀಕಿಗೆ ಗೊತ್ತಾಗಿದ್ದರೂ ಜಿಲ್ಹಾ ಕಲೆಕ್ಟರರು ಅವರ ಕಾರ್ಯಕ್ರಮಗಳನ್ನು ಅವ್ಯವಸ್ಥಿತವಾಗಿ ಮತ್ತು ನಗರಸಭೆಯ ನಾಗರಿಕ ಹಕ್ಕಿಗೆ ಅಡ್ಡಿಮಾಡಿದ್ದು ವಿಷಾದಕರವೆಂದು ಮುಂತಾಗಿ ವಿಜಾಪುರ ಮುನಸಿಪಾಲಿಟಿಯವರು ಅಭಿಪ್ರಾಯಪಟ್ಟಿರುವರೆಂದು ತಿಳಿಯುತ್ತದೆ,

ವಿಜಾಪುರದ ಕಲೆಕ್ಟರ ಶ್ರೀ ಆಯ. ಟಿ. ಅಲ್ಮೋಲಾ ಇವರಿಗೆ ಠಾಣೆಗೆ ವರ್ಗಾಗಿದ್ದು ವಿಜಾಪುರಕ್ಕೆ ಶ್ರೀ ಪಾರ್ಪಿಯಾ ಎಂಬವರು ಬರಲಿರುವರೆಂದು ತಿಳಿಯುತ್ತದೆ.

ಜಾನೇವಾರಿ ತಿಂಗಳ ಕೊನೆಯಲ್ಲಿ ಬಾಬೂ ಜಾಗಿರದಾರ ಎಂಬ ಮೋಟರ ಒಡೆಯನನ್ನು ಕೆರೂರಲ್ಲಿಯ ಮೂವರು ಪೋಲೀಸರು ರಟ್ಟೆಗೆ ಹಗ್ಗ ಕಟ್ಟಿ ಪೋಲೀಸ ಠಾಣೆಗೆ ಎಳೆದೊಯ್ದು ಅಪಮಾನಗೊಳಿಸಿದರೆಂಬ ಅಪಾದನೆಯ ಬಗ್ಗೆ ಬಾಗಲಕೋಟೆ ರೆಸಿಡೆಂಟ ಕೋರ್ಟಿನಲ್ಲಿ ಜಾಗಿರದಾರರು ಫಿರ್ಯಾದ ಮಾಡಿದ್ದಾರೆ.

## ಕನ್ನಡ ಸಂಸ್ಥಾನ

ರಾಯಚೂರಿನ ಹಮದರ್ದ ಶಾಲೆಯ ಕಟ್ಟಡದ ವಿಸ್ತರಣ ಮತ್ತು ದುರಸ್ತಿಗಾಗಿ ಅಲ್ಲಿಯ ಕಾಣಿಕೆ ನಿಧಿಯವರು ೨೫೦೦ ರೂಪಾಯಿಗಳನ್ನು ಕೊಟ್ಟಿರುವರೆಂದು ಶಾಲೆಯ ಕಾರ್ಯದರ್ಶಿಯಗಳು ತಿಳಿಸುತ್ತಾರೆ.

ಜುಲೈ ತಿಂಗಳ ೭ ನೇ ತಾರೀಕಿಗೆ ಕೊಪ್ಪಳ ವೀರಶೈವ ಬೋರ್ಡಿಂಗಿನ ೬ ನೇ ವರ್ಷದ ವಾರ್ಷಿಕೋತ್ಸವವನು ನೆರವೇರಿಸಬೇಕೆಂದು ನಿರ್ಧರಿಸಲಾಗಿದೆ. ದಿ. ಬ. ಮೇಜರ ಆರ್. ಎಸ್. ಹಿರೇಮಠರು ಅಧ್ಯಕ್ಷರಾಗಲು ಒಪ್ಪಿರುವರು.

ಶ್ರೀ ಭಾವೂ ವೀರೋಜಿ, ಶ್ಯಾಮ ಜಿರಗಾಳೆ ಮತ್ತು ಕೃಷ್ಣಾ ತೋಡಕರ ಇವರ ನೇತೃತ್ವದಲ್ಲಿ ೨೦೦ ಜನ ಕಾರ್ಯಕರ್ತರು ಮಿರಜಿಯ ಪರೆಯ ಅಂಗಡಿಯ ಮುಂದೆ ೨೬ ನೇ ತಾರೀಕು ಮುಂಜಾವಿನಿಂದ ನಿರೋಧನ ಪ್ರಾರಂಭಿಸಿರುವರು. ಇದಕ್ಕೂ ಮೊದಲು ಅವರು ನಗರ ಸಂಕೀರ್ತನವನ್ನು ಮಾಡಿದರು.

ಪಂಡಿತ ಜವಾಹರಲಾಲರ ಬಂಧನಕ್ಕಾಗಿ ಕಾಶ್ಮೀರ ಸರಕಾರದ ಕೃತಿ ನಿಷೇಧಿಸಲು ಸೊಂಡೂರ ವರ್ತಕರು ಹರತಾಳ ಆಚರಿಸಿದರು. ಕಾಂಗ್ರೆಸ ಬೈಲಲ್ಲಿ ಸಭೆ ಸೇರಿ ನಿಷೇಧಸೂಚಕ ಗೊತ್ತುವಳಿಯಾಯಿತು.

ಚಿತ್ರದುರ್ಗದ ವ್ಯಾಪಾರಿಗಳಾದ ಶ್ರೀ. ಬಿ. ಕೆ. ತಿಪ್ಪಣ್ಣನವರಿಗೆ ಚಿತ್ರದುರ್ಗ ಜಿಲ್ಲೆಗಾಗಿ ದೊರೆತ ೧೦೦ ಚೀಲ ಕಡ್ಲಿ ಹಿಟ್ಟನಲ್ಲಿ ಹುಣಸಿಕಾಳುಗಳ ಪುಡಿ ಕೂಡಿದ್ದು ಕಂಡುಬಂತು. ಈ ಬಗ್ಗೆ ತಪಾಸಣೆ ನಡೆಸಿ ತಕರಾರು ಇದ್ದ ಚೀಲಗಳನ್ನು ಸೀಲ ಮಾಡಿರುವರು.

ಮಿರಜಿ ಸಂಸ್ಥಾನದ ಅಹಾರ – ಖಾತೆಯಲ್ಲಿಯ ಲಂಚಗುಳಿತನದ ವಿಚಾರಣೆ ಮಾಡುವದಕ್ಕಾಗಿ ಒಂದು ಸಮಿತಿಯನ್ನು ನೇಮಿಸಬೇಕಾಗಿ ಮಿರಜಿಯಲ್ಲಿಯ ೨೦ ಸದ್ಗೃಹಸ್ಥರು ಸೇರಿ ಒಂದು ಮನವಿಯನ್ನು ರಾಜಾಸಾಹೇಬರಿಗೆ ಮಾಡಿಕೊಂಡಿದ್ದಾರೆ. ಬೇಗನೆ ಈ ಬಗ್ಗೆ ವ್ಯವಸ್ಥೆ ಮಾಡಲಾಗುವದೆಂದು ಅವರಿಗೆ ಉತ್ತರ ದೊರೆತಿದೆಯಂತೆ.

ಸಾಂಗಲಿ ಸರಕಾರದ ಕಾರ್ಯಕಾರೀ ಮಂಡಳ ಅಧ್ಯಕ್ಷರಾಗಿ ನೇಮಿಸಲ್ಪಟ್ಟ ಸರ್ ಜಗನ್ನಾಥ ಲಕ್ಷ್ಮಣ ಸಾಠೆಯವರು ಪತ್ನಿ ಪರಿವಾರ ಸಮೇತ ೨೪ವೇ ತಾರೀಕು ಸಾಂಗಲಿಗೆ ಬಂದರು.

ಕೊಲ್ಹಾಪುರದ ಸದ್ಯದ ರೀಜನ್ಸಿ ಕೌನ್ಸಿಲ್ಲಿನಲ್ಲಿ ಸದ್ಯದ ಲೋಕನಿಯುಕ್ತ ಪ್ರತಿನಿಧಿಗಳಲ್ಲಿ ಇಬ್ಬರನ್ನು ದಿವಾಣರನ್ನಾಗಿ ನೇಮಿಸಬೇಕೆಂದು ಹಿಂದುಸ್ಥಾನ ಸರಕಾರದ ರಾಜಕೀಯ ವರ್ಗದ ವಿಚಾರವಿದೆಂದು ತಿಳಿಯುತ್ತದೆ.

ಇದರ ಪೂರ್ವವಿಚಾರಣೆಯಲ್ಲಿ ಸಾಕ್ಷಿ ಹೇಳಿದರೆಂಬ ಕಾರಣದಿಂದ ಸಾತಪ್ಪಾ ಮತ್ತು ಹಣಮಂತಪ್ಪ ಎಂಜೀರ್ವರನ್ನು ಪರಪ್ಪಾ ಮತ್ತು ಮಹಬೂಬ ರಕಾನ್ ಸ್ಟೇಬಲರು ಲಾಕಪಿನಲ್ಲಿಟ್ಟು ಮೈಮುರಿ ಥಳಿಸಿದರೆಂದು ಮೇಲಧಿಕಾರಿಗಳಿಗೆ ದೂರಿಕೊಂಡಿದ್ದು ಪೋಲೀಸ ಇನಸ್ಪೆಕ್ಟರರು ಕೆರೂರಿಗೆ ಬಂದು ತಪಾಸಣೆ ಮಾಡಿಕೊಂಡು ಹೋದರೆಂದು ತಿಳಿಯುತ್ತದೆ.










# ಕರ್ಮವೀರ ಹರಿಜನ ಪುರವಣಿ


## ಬಿಳಿಯನ ಹೊರೆ!

ರಾಯ್ಟರ ಸುದ್ದಿ ಸಂಸ್ಥೆಯ ವರದಿಗನುಸಾರವಾಗಿ, ಕೆಲ ವಿಶಿಷ್ಟ ಹಿಂದೀಯರು- ಸ್ತ್ರೀಯರು ಮತ್ತು ಪುರುಷರು- ದಕ್ಷಿಣ ಅಫ್ರಿಕೆಯ ಯೂನಿಯನ್ ಪಾರ್ಲಮೆಂಟಿನ ಪ್ರತ್ಯೇಕೀಕರಣ ಕಾಯಿದೆಯ ವಿರುದ್ಧ ಜೂನ ೧೪ಕ್ಕೆ ಡಾ. ನಾಯಕರ ಮುಂದಾಳ್ತನದಲ್ಲಿ ಸತ್ಯಾಗ್ರಹವನ್ನು (ದಕ್ಷಿಣ ಅಫ್ರಿಕೆಯಲ್ಲಿ ಸಾಮಾನ್ಯವಾಗಿ ಇದಕ್ಕೆ ನಿಷ್ಕ್ರಿಯ ಪ್ರತಿಭಟನೆಯೆಂದು ಹೆಸರಿದೆ) ಆರಂಭಿಸಿದ್ದಾರೆ. ಸರಕಾರವಾಗಲಿ ನಗರಸಭೆಯಾಗಲಿ ಈ ವಿಷಯ ಪ್ರತಿಭಟಕರ ವಿರುದ್ಧ ಯಾವದೇ ಕ್ರಮ ತೆಗೆದುಕೊಳ್ಳಲಿಲ್ಲವಾದರೂ ದರ್ಬಾನದ ಕೆಲ 'ಬಿಳಿಯರು' ಆ ಕಾಯಿದೆಯನ್ನು ಅಮಲಿನಲ್ಲಿ ತರುವ ಭಾರವನ್ನು ತಾವೇ ತೆಗೆದುಕೊಂಡು ಸತ್ಯಾಗ್ರಹಿಗಳ ಶಿಬಿರದ ಮೇಲೆ ರಾತ್ರಿಯಲ್ಲಿ ದಾಳಿಮಾಡಿ ಡೇರೆಗಳನ್ನು ಲಗುಬಗೆಯಿಂದ ಕತ್ತರಿಸಿ ಎತ್ತಿಕೊಂಡು ಹೋಗಿಬಿಟ್ಟರೆಂದೂ ಅದೇ ಸಂಸ್ಥೆ ವರದಿ ಮಾಡಿದೆ. "೧೦೦ ಜನ ಬಿಳಿ ಯುವಕರ ಗುಂಪೊಂದು ೫೦ ಜನ ಸತ್ಯಾಗ್ರಹಿಗಳ ವ್ಯೂಹವನ್ನು ಮುರಿದು ನುಗ್ಗಿ ಡೇರೆಗಳನ್ನು ಎಳೆದು ಕೆಡಹಿ, ಹರಿದು, ಎಳೆದುಕೊಂಡೊಯ್ದರು ಕೆಲವು ಶಿಬಿರ ಮಂಚಗಳನ್ನು ಪುಡಿಪುಡಿ ಮಾಡಿ ಕಂಬಳಿಗಳನ್ನೂ ತಲೆದಿಂಬುಗಳನ್ನೂ ಎತ್ತಿಕೊಂಡು ಹೋದರು. ಈ ಅತಿಕ್ರಮಣದಲ್ಲಿ ಇಬ್ಬರು ಸ್ತ್ರೀ-ಸತ್ಯಾಗ್ರಹಿಗಳೂ ಪೀಡೆಗೊಳಗಾದರು. ಅವರನ್ನು ಒದೆಯುವದಾಯಿತೆಂದೂ ಆದರೆ ಅವರು ಗಾಯಗೊಂಡಿಲ್ಲವೆಂದೂ ಹೇಳಲಾಗಿದೆ"

ಮೂರು ದಿನಗಳ ವರೆಗೆ ಇಂತು ಗುಂಡಗಿರಿ ನಡೆದ ನಂತರ, ನಗರ ಪೋಲೀಸರು ಸತ್ಯಾಗ್ರಹ ರಂಗದ ಸಮೀಪದಲ್ಲಿ ತಳವೂರಿ ಸತ್ಯಾಗ್ರಹಿಗಳನ್ನು ಹಿಡಿಸದಂತೆಯೂ ಬಲಾತ್ಕಾರದಿಂದ ಅವರನ್ನು ಬಗ್ಗಿಸುವ ಪ್ರಯತ್ನ ಮಾಡದಂತೆಯೂ ಅತ್ಯಾಚಾರಿಗಳಿಗೆ ಎಚ್ಚರಿಕೆ ಕೊಟ್ಟರೆಂದು ಪತ್ರಿಕೆಗಳಲ್ಲಿ ಪ್ರಸಿದ್ಧವಾಗಿದೆ. ಇದು ಧೈರ್ಯದಾಯಕವಾದ ಸುದ್ದಿ. ಇದು ಪೂರ್ಣ ವಿಶ್ವಾಸಕ್ಕೆ ಅರ್ಹವಾಗಲೆಂದೂ ರಕ್ಷಣೆಯೆಂದರೆ ಕಿರುಕುಳ ಅಥವಾ ಸಂಘಟಿತ ತರಹದ ಅತ್ಯಾಚಾರದ ವಿರುದ್ಧ ರಕ್ಷಣೆಯಾಗಿ ಪರಿಣಮಿಸಲೆಂದೂ ಆಶಿಸೋಣ. ಅಮೇರಿಕೆಯಲ್ಲಿ ನಿರ್ಲಜ್ಜತೆಯಿಂದ ಅನೇಕ ವೇಳೆ ಪ್ರದರ್ಶಿಸಲ್ಪಡುವ ಜನಜಂಗುಳಿಯ ಈ ಸಂಘಟಿತ ಅತ್ಯಾಚಾರ "ಲಿಂಚಿಂಗ್" ಅಥವಾ ಚಿತ್ರಹಿಂಸೆಯೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

ಪ್ರತ್ಯೇಕೀಕರಣ ಕಾಯಿದೆ ಪಾಸಾಗುವ ಮೊದಲು, ಸಜ್ಜನರೆನಿಸಿದ್ದ ಬಿಳಿಯರೇ ಏಶಿಯಾಟಿಕ್ ವಿರೋಧಿ ಚಳವಳಿಯನ್ನು ಉನ್ಮಾದಾವಸ್ಥೆಯ ವರೆಗೂ ಏರಿಸಿಬಿಟ್ಟಿದ್ದರು. ಪ್ರತ್ಯೇಕೀಕರಣದ ಕಾಯಿದೆಯನ್ನು, ನಿರೀಕ್ಷೆಗೆ ಮೀರಿಯೇ ಎನ್ನಬಹುದು, ಪಾಸಾಗುವಂತೆ ಮಾಡುವದರಲ್ಲಿ ಯಶಸ್ವಿಗಳಾದುದರಿಂದಲೇ ತೃಪ್ತರಾಗದೆ ಈ ಚಳವಳಿಗಾರರಲ್ಲಿ ಮುಂದುವರಿದವರು ತಾವು ಮಾಡಿಸಿದ ಕಾಯಿದೆಗಳನ್ನು ಅಮಲಿಗೆ ತರುವ ಕೆಲಸವನ್ನು ತಾವೇ ಕೈಕೊಂಡಿರುವರು. ಇದರಿಂದ ಬಿಳಿ ಮನುಷ್ಯರ ಹೆಸರಿಗೇ ಅವಹೇಲನೆಯನ್ನು ತರುತಿರುವೆವೆಂಬ ಸಂಗತಿ, ಪಾಪ, ಅವರಿಗೆ ಗೊತ್ತಿಲ್ಲ!!!

ತಾವು ಮತಹಿತ್ತು ಮಾಡಿಸಿದ ಕಾಯಿದೆಗಳಲ್ಲಿ ಗೌರವವುಳ್ಳ ಬಿಳಿಯ ಸ್ತ್ರೀ-ಪುರುಷರಲ್ಲಿ ನನ್ನ ಬಿನ್ನಹವಿಷ್ಟೆ: ಅವರು ಗುಂಡಗಿರಿಯ ಮತ್ತು ಚಿತ್ರಹಿಂಸೆಯ ವಿರುದ್ಧ ಜನಮತವನ್ನು ಸಂಘಟಿಸಬೇಕು.

ದುಷ್ಟ ಕಾಯಿದೆ, ರೂಢಿ, ಅಥವಾ ಇತರ ಕೇಡುಗಳನ್ನು ಅತ್ಯಂತ ಸಾಧುವಾದ ರೀತಿಯಿಂದ ಕಿತ್ತು ಹಾಕಿಸುವದೇ ಸತ್ಯಾಗ್ರಹದ ಗುರಿ. ಗುಂಡಗಿರಿ, ಚಿತ್ರಹಿಂಸೆಗಳನ್ನೊಳಗೊಂಡು ಎಲ್ಲ ಬಗೆಯ ಬಲಾತ್ಕಾರ ಪದ್ಧತಿಗಳ ಬದಲು ಅತ್ಯಂತ ಫಲಕಾರಿ ಉಪಾಯವೆಂದು ಅದು ರೂಪಿಸಲ್ಪಟ್ಟಿದೆ. ಅದು ಮನುಷ್ಯನ ಹೃದಯಕ್ಕೆ ಮೊರೆಯಿಡುತ್ತದೆ. ಎಷ್ಟೋ ವೇಳೆ ತರ್ಕ ನಿಷ್ಫಲವಾಗುವದುಂಟು. ಅಹಂಕಾರದಿಂದ ವಿಕೃತವಾಗಿರುವದು. ಮನುಷ್ಯನ ಹೃದಯಕ್ಕೆ ಯೋಗ್ಯ ರೀತಿಯಲ್ಲಿ ಮೊರೆಯಿಟ್ಟರೆ ಅದೆಂದೂ ವಿಫಲವಾಗುವುದಿಲ್ಲವೆಂದು ಸತ್ಯಾಗ್ರಹದ ಸಿದ್ಧಾಂತ. ತೋರಿಕೆಯ ಅಪಯಶಸ್ಸು ಸತ್ಯಾಗ್ರಹದ ತತ್ವದ ದೋಷದಿಂದ ಒದಗದೆ, ಅವನು ಯಾವುದೇ ಧ್ಯೇಯದಿಂದ ಹುರಿಗೊಳಿಸಲ್ಪಟ್ಟರಲಿ ಸತ್ಯಾಗ್ರಹಿಯ ಅಸಾವಧ್ಯದಿಂದಲೇ ಒದಗುತಿರುತ್ತದೆ. ಇದಕ್ಕೆ ಪರಿಪೂರ್ಣವಾದ ಐತಿಹಾಸಿಕ ನಿದರ್ಶನವನ್ನು ಕೊಡಲು ಸಾಧ್ಯವಾಗಲಿಕ್ಕಿಲ್ಲ. ಯೇಸುವಿನ ಹೆಸರು ತಕ್ಷಣ ನಾಲಿಗೆಗೆ ಬರುತ್ತದೆ. ಅದು ಅತ್ಯುಜ್ವಲ ವಿಫಲತೆಯ ನಿದರ್ಶನ. ಅವನು ಪಶ್ಚಿಮ ದೇಶಗಳಲ್ಲಿ ನಿಷ್ಕ್ರಿಯ ಪ್ರತಿಭಟಕರಲ್ಲಿ ಚಕ್ರವರ್ತಿಯೆಂದು ಕೊಂಡಾಡಿಸಿಕೊಂಡಿದ್ದಾನೆ. ಅನೇಕ ವರ್ಷಗಳ ಹಿಂದೆ ದಕ್ಷಿಣ ಅಫ್ರಿಕೆಯಲ್ಲಿ, "ನಿಷ್ಕ್ರಿಯ" ಎಂಬೀ ಗುಣವಾಚಕ ಕನಿಷ್ಠ ಯೇಸುವಿನ ಮಟ್ಟಿಗಾದರೂ ಅನುಚಿತ ಶಬ್ದವೆಂದು ತೋರಿಸಿಕೊಟ್ಟೆ. ಬಹುಶಃ ಇತಿಹಾಸದಲ್ಲಿ ಅವನಿಗಿಂತ ಹೆಚ್ಚು "ಸಕ್ರಿಯ" ಪ್ರತಿಭಟಕರು ಬೇರೊಬ್ಬರಿರಲಾರರು. ಅವನದು ಸರ್ವೋತ್ಕೃಷ್ಟ ಅಹಿಂಸೆಯಾಗಿತ್ತು. ಇರಲಿ. ಮುಖ್ಯ ವಿಷಯವನ್ನು ಬಿಟ್ಟು ಅಲೆದಾಡೋಣ ಬೇಡ. ಇಂಥ ಯೇಸುವಿನ ಬಗೆಯ ಪ್ರತಿಭಟನೆಯನ್ನೇ ಈಗ ಬಿಳಿಯ ಗುಂಡರು ಮುರಿಯಲು ಹವಣಿಸುತಿರುವುದು. ನಮ್ಮ ದೇಶಬಾಂಧವರ ಶೂರ ಪ್ರತಿಭಟನೆಯಿಂದ ಗುಂಡರು ನಾಚಿಕೆಗೊಂಡು ಸದ್ದಡಗಿ ಹೋಗಲೆಂದಿಷ್ಟೇ ಅಲ್ಲ, ದಕ್ಷಿಣ ಅಫ್ರಿಕೆಯ ಕಾಯಿದೆ ಹೊತ್ತಿಗೆಯನ್ನು ವಿಕೃತಗೊಳಿಸಿರುವ ಈ ಕಾಯಿದೆಯನ್ನು ಉಪಸಂಹರಿಸಲು ಅದು ಕಾರಣವಾಗಲೆಂದೂ ಆಶಿಸೋಣ. ಒಂದೇ ಪಕ್ಷದಲ್ಲಿ ಪರಿಪೂರ್ಣ ಸ್ವರೂಪದ ಶುದ್ಧ ಆತ್ಮಗ್ಲಾನಿ ಅಥವಾ ಕ್ಲೇಶಭೋಗವಿದ್ದರೆ ಅದು ಅನ್ಯಾಯದ ವಿರುದ್ಧ ಜನಾಭಿಪ್ರಾಯವನ್ನು ಕೆದರುವದರಲ್ಲಿ ಕೃತಾರ್ಥವಾಗುತ್ತದೆ. ಶಾಸನಸಭೆ ಏನೆಂದರೂ ಜನತೆಯ ಪ್ರತಿನಿಧಿ. ಜನಮತಕ್ಕೆ ವಿಧೇಯವಾಗಿ ಅದು ಅನ್ಯಾಯದ ಕಾಯಿದೆಯೊಂದನ್ನು ಮಾಡಿದೆ ಆ ಅನ್ಯಾಯವನ್ನು ತಿಳಿದು ಎಚ್ಚತ್ತ ಜನತೆ ಅದನ್ನು ಹಿಂತೆಗೆಯಬೇಕೆಂದು ಬೇಡಿದರೆ ತಾನು ಇಟ್ಟ ಹೆಜ್ಜೆಯನ್ನು ಶಾಸನ ಸಭೆ ಹಿಂತೆಗೆಯಬೇಕಾಗುವದು.

"ನಿಜವಾದ ಬಿಳಿಮನುಷ್ಯನ" ಹೊರೆಯೆಂದರೆ, ರಕ್ಷಕನೆಂಬ ವೇಷದಲ್ಲಿ ಕಂದು ಅಥವಾ ಕಪ್ಪು ಜನರ ಮೇಲೆ ಅಧಿಕಾರ ಚಲಾಯಿಸುವದಲ್ಲ— ತನ್ನನ್ನು ಕೊರೆಯುತಿರುವ ಕಪಟವನ್ನು ಕಿತ್ತೊಗೆಯುವದೇ ಅವನ ಹೊರೆ. ಬಿಳಿ ಜನರು ಎಲ್ಲ ಮನುಷ್ಯರೊಡನೆ ಸಮಾನಿಕರಂತೆ ನಡೆದುಕೊಳ್ಳಲು ಕಲಿಯಬೇಕಾದ ದಿನಗಳಿವು. ಬಿಳಿ ಚರ್ಮದಲ್ಲಿ ಅಂಥ ರಹಸ್ಯವೇನೂ ಅಡಕವಾಗಿಲ್ಲ. ಸಮಾನವಾದ ಅವಕಾಶವೊಂದಿದ್ದರೆ, ಯಾವದೇ ಬಣ್ಣದ ಯಾವದೇ ದೇಶದ ಮನುಷ್ಯನು ಬೇಕಾದವನಿಗೆ ಸರಿದೂಗಬಲ್ಲನೆಂಬ ಮಾತು, ಮತ್ತೆ ಮತ್ತೆ ಸಿದ್ಧ ಮಾಡಿ ತೋರಿಸಲ್ಪಟ್ಟಿದೆ.

ಅದ್ದರಿಂದ ಜಗತ್ತಿನ ಬಿಳಿಜನರೆಲ್ಲ ಮುಖ್ಯವಾಗಿ ಹಿಂದುಸ್ಥಾನದಲ್ಲಿರುವ ಬಿಳಿಯರು ದಕ್ಷಿಣಾಫ್ರಿಕೆಯಲ್ಲಿರುವ ಹಿಂದೀಯರ ಸ್ವಾಭಿಮಾನವನ್ನೂ ಮಾತೃಭೂಮಿಯ ಗೌರವವನ್ನೂ ಕಾಪಾಡಲು ಧೈರ್ಯದಿಂದ ಹೆಣಗಾಡುತಿರುವ ಹಿಂದೀ ಸತ್ಯಾಗ್ರಹಿಗಳನ್ನು ಪೀಡಿಸದಂತೆ ದಕ್ಷಿಣಾಫ್ರಿಕೆಯ ತಮ್ಮ ವರ್ಣಬಾಂಧವರಿಗೆ ಕರ್ತವ್ಯಜಾಗ್ರತಿ ಮಾಡಿಕೊಡಲು ತಮ್ಮ ವರ್ಚಸ್ಸನ್ನುಪಯೋಗಿಸುವದು ಅವಶ್ಯವಾಗಿದೆ. "Do unto others as you would that they should do unto you" (ತನ್ನಂತೆ ಪರರ ಬಗೆ) ಅಥವಾ ಈ ಸೂಳ್ನುಡಿಯನ್ನು ಉಪದೇಶಿಸಿದವನ (ಯೇಸುವಿನ) ಹೆಸರನ್ನು ಅವರು ಬರಿದೆ ಉಚ್ಚರಿಸುತಿರುವರೆ? ಮೇಲಿನ ಸಂದೇಶವನ್ನು ಜಗತ್ತಿಗಿತ್ತ ಆ ಕಂದು ಬಣ್ಣದ ಏಶಿಯಾವಾಸಿ ಮಹಾಪುರುಷನನ್ನು ಅವರು ತಮ್ಮ ಹೃದಯದಿಂದ ಗಡಿಪಾರು ಮಾಡಿರುವರೆ? ಮಾನವ ಜಾತಿಯ ಸರ್ವಶ್ರೇಷ್ಠ ಅಚಾರ್ಯರೆಲ್ಲರೂ ಏಶಿಯಾದಲ್ಲಿ ಹುಟ್ಟಿದವರು, ಬಿಳಿಯೋರೆಯಲ್ಲದವರು, ಎಂಬ ಮಾತನ್ನು ಅವರು ಮರೆತುಬಿಟ್ಟರೆ? ಈ ಆಚಾರ್ಯರು ಭೂಮಿಗಿಳಿದು ಬಂದು ದಕ್ಷಿಣಾಫ್ರಿಕೆಗೆ ಹೋದರೆ, ಬೇರ್ಪಡಿಸಿದ ಸ್ಥಳಗಳಲ್ಲಿ ವಾಸಿಸಬೇಕಾಗುವದು ಮತ್ತು ಬಿಳಿಯರಿಗೆ ಸಮಾನರಾಗಲು ಅಯೋಗ್ಯರಾದ ಏಶಿಯಾದ ಕಂದುಬಣ್ಣದ ಜನರಲ್ಲಿ ಅವರನ್ನು ಸೇರಿಸಬೇಕಾಗುವದಲ್ಲವೆ?

ತನ್ನ ಅಸ್ತಿತ್ವಕ್ಕಾಗಿ ವರ್ಣದ್ವೇಷದ ಕಾಯಿದೆ ಮತ್ತು ಚಿತ್ರಹಿಂಸಾಶಾಸನದಂಥ ಸಂದಿಗ್ಧ ಉತ್ತೇಜನದ ಅವಶ್ಯಕತೆಯುಳ್ಳ ಸಂಸ್ಕೃತಿ, ಸಂಸ್ಕೃತಿಯೆನಿಸಿಕೊಳ್ಳಲು ಯೋಗ್ಯವೆ? ನಮ್ಮ ದೇಶಬಾಂಧವರ ತಲೆಮೇಲೆ ಕವಿದಿರುವ ಕಾರ್ಮೋಡಗಳಲ್ಲಿ ಹಣಿಕಿಕ್ಕುವ ಕಿರಣವೊಂದಿದೆ— ಬಿಳಿಯ ಪಾದ್ರಿ ರೆವ್ಹರೆಂಡ ಸ್ಕಾಟರೂ ಅವರಷ್ಟೇ ಬಿಳಿಯರಾದ ಅವರ ಸಹಕಾರ್ಯಕರ್ತರೂ ಹಿಂದೀ ಸತ್ಯಾಗ್ರಹಿಗಳಲ್ಲಿ ಕ್ಲೇಶಗಳ ಭಾಗಿಗಳಾಗಲು ಮುಂದಬಂದು ತೋರಿಸಿರುವ ದಿಟ್ಟತನವೇ ಆ ಆಶಾಕಿರಣ.

ಹೊಸದಿಲ್ಲಿ ಮೋ. ಕ. ಗಾಂಧಿ
೨೬-೬-೪೬

## ಟೀಕೆ—ಟಿಪ್ಪಣಿಗಳು

### ಈ ಅಸಹಾನುಭೂತಿಯೇಕೆ?

ಪ್ರಶ್ನೆ:— ಸರಳ ಮನಸಿನ ಜೈನರು ನಿಮ್ಮನ್ನು ಜೈನರೆಂದೇ ಭಾವಿಸುವರು. ಅಂತು ಕರೆಸಿಕೊಳ್ಳಲು ನೀವೂ 'ನಾಚುವುದಿಲ್ಲ' ಆದರೂ ಹರಿಜನದಲ್ಲಿ ಮಹಾವೀರನ ಹೆಸರುಕೂಡ ನೀವು ಎಂದೂ ತರುತಿಲ್ಲ. ನಿಮ್ಮಂಥ ಮಹಾತ್ಮರಿಗೆ ಇದು ಒಗ್ಗುವುದೇ?

ಉತ್ತರ:— ಪತ್ರ ಲೇಖಕನು ಕೇಳಿದ ಪ್ರಶ್ನೆಯ ಸಾರವನ್ನು ನನ್ನ ಶಬ್ದಗಳಲ್ಲಿ ಮೇಲೆ ಕೊಟ್ಟಿದ್ದೇನೆ. ಇದರ ಮೂಲವೆಂತಿರಬೇಕೆಂಬುದನ್ನು ವಾಚಕರು ಇದರಿಂದ ಊಹಿಸಬಹುದು. ಜೈನನಾಗದಿರುವ ಅಪರಾಧಿ ನಾನೆಂಬುದನ್ನೊಪ್ಪಿಕೊಳ್ಳುವೆ. ಆದರೆ ಜೈನರೆಂದು ಹೇಳಿಕೊಳ್ಳುವ ಅನೇಕ ಜನರಿಗಿಂತ ಹೆಚ್ಚು ಮಹಾವೀರನನ್ನು ತಿಳಿದುಕೊಂಡ ಭಕ್ತನಾನಿರಬಹುದು. ಆದರೂ ಮಹಾವೀರಸ್ವಾಮಿಯ ಭಕ್ತನಾನಲ್ಲ. ಅದರಿಂದ ಅವರಿಗೆ ಇಲ್ಲವೆ ಅವರ ಭಕ್ತರಿಗೆ ಯಾವದೆ ಬಗೆಯ ಹಾನಿಯಿಲ್ಲ. ನನಗೊಬ್ಬನಿಗೇ ಅದರಿಂದ ಹಾನಿ. ನಾವು ಯಾರನ್ನು ಪೂಜಿಸುವೆವೊ ಮತ್ತು ಯಾರ ಯಾರ ಬಗ್ಗೆ ನಮ್ಮಲ್ಲಿ ಆದರ ಭಾವವಿದೆಯೊ ಅಂಥವರ ಬಗ್ಗೆ ನಮ್ಮ ನೆರೆಯವರು ಅಲಕ್ಷ ತೋರುತಿರುವುದನ್ನು ನಾವು ತಿರಸ್ಕರಿಸುವುದರಿಂದ ಕೇವಲ ನಮ್ಮ ಅಶಕ್ತತೆಯನ್ನೆ ವ್ಯಕ್ತಪಡಿಸುತಿವೆಂದು ನಾನು ಸೂಚಿಸಬಯಸುತ್ತೇನೆ.

ಹೊಸದಿಲ್ಲಿ ಮೋ. ಕ. ಗಾಂಧಿ
೨೫-೬-೪೬ (ಹರಿಜನ ಬಂಧುವಿನಿಂದ)

## ಹರಿಜನ ನಿಧಿ

ಪ್ರಶ್ನೆ:— ನೀವು ಹೋದಲ್ಲೆಲ್ಲ ಹರಿಜನರಿಗಾಗಿ ನಿಧಿ ಕೂಡಿಸುತಿರುವಿರಿ. ಪತ್ರಿಕೆಗಳಲ್ಲಿ ಪ್ರಕಟವಾಗುವ ಅಂಕಿಗಳನ್ನು ನೋಡಿದರೆ ಹಲವು ಸಲ ಅದಕ್ಕಾಗಿ ನೀವು ಬಹಳ ಹಣ ಕೂಡಿಸುತಿರೆಂದು ಗೊತ್ತಾಗುವುದು. ನೀವು ಕೂಡಿಸಿದ ಒಟ್ಟು ಹಣವೆಷ್ಟು? ಅದನ ವೆಚ್ಚ ಮಾಡಿದ್ದೆಂತು? ಯಾರಾದರೂ ಆ ನಿಧಿಯನ್ನು ತಪಾಸ ಮಾಡಿ ಪರಿಶೋಧಿಸಿರುವರೇ? ಆ ನಿಧಿಯು ದುರುಪಯೋಗವಾಗುತಿದೆಂದು ನನ್ನ ಅರ್ಥವಲ್ಲ. ಆದರೆ ಈ ವಿಷಯಗಳಲ್ಲಿ ಜನರನ್ನು ಅಜ್ಞಾನದಲ್ಲಿ ಕೆಡಹುವುದು ನಿಮಗೆ ಸರಿಯಲ್ಲ.

ಉತ್ತರ:— ಈ ಪ್ರಶ್ನೆಗೆ ಉತ್ತರದ ಅವಶ್ಯಕತೆ ತೋರುವುದಿಲ್ಲ. ಆದರೆ ಈ ಲೇಖಕರಂತೆ ಅನೇಕರು ತಪ್ಪು ತಿಳವಳಿಕೆ ಮಾಡಿಕೊಂಡಿರಬಹುದು. ಪ್ರಶ್ನೆ ನ್ಯಾಯ್ಯವೆ ಆಗಿದೆ. ಉತ್ತರ ಸರಳ ಇರುವುದು. ಹರಿಜನ ನಿಧಿಯೆಂದ್ಹು ನಾನು ಎತ್ತಿದ ಹಣವನ್ನೆಲ್ಲ ಹರಿಜನ ಸೇವಕ ಸಂಘಕ್ಕೆ ಕೊಡುತ್ತಿರುವೆನು. ಶ್ರೀ ಠಕ್ಕರಬಾಪ್ಪಾ ಇವರು ಆ ನಿಧಿಯ ಪಾಲಕರು. ಹರಿಜನ ಸೇವಕ ಸಂಘದ ಸಲಹೆ ಸೂಚನೆ ಮತ್ತು ಒಪ್ಪಿಗೆಯಂತೆ ಆ ಹಣವನ್ನು ವೆಚ್ಚ ಮಾಡಲಾಗುವದು. ಅದರಲ್ಲಿ ಕೆಲ ಹಣ ನನ್ನ ಸೂಚನೆಗಳನ್ವಯ ವೆಚ್ಚ ಮಾಡಲಾಗುವುದು. ಆದರೆ ಹರಿಜನರ ಸೇವೆಗಾಗಿಯೆ ಆ ಹಣದ ವಿನಿಯೋಗವಾಗತಕ್ಕದ್ದು. ಅದರಂತೆಯೇ ಉಳಿದ ನಿಧಿಗಳ ವಿನಿಯೋಗ. ಕಾಣಿಕೆಗಳ ವಿನಿಯೋಗ ನನ್ನ ಮನಸ್ಸಿನಂತೆ ಮಾಡಲ್ಪಡುವದು. ಪ್ರತಿಯೊಂದು ಪೈಯ ಲೆಕ್ಕವೂ ಇಡಲಾಗಿದೆ ಮತ್ತು ಆದಾಯ ಮತ್ತು ವೆಚ್ಚದ ಲೆಕ್ಕವೆಲ್ಲ ಆಗಾಗ ಪರಿಶೋಧಕರಿಂದ ಪರೀಕ್ಷಿಸಲ್ಪಟ್ಟು ಸರ್ಟಿಫಿಕೇಟು ಪಡೆಯಲಾಗುತ್ತದೆ.

ಹೊಸದಿಲ್ಲಿ
೨೫—೬—೪೬ ಮೋ. ಕ. ಗಾಂಧಿ
(ಹರಿಜನ ಬಂಧುವಿನಿಂದ)

## ಅನುಕರಣ

ಪ್ರಶ್ನೆ– ಕೇವಲ ನಿಮ್ಮ ಅನುಕರಣ ಮಾಡಿ ಮಾಂಸ ತಿನ್ನುವುದನ್ನು ಯಾರು ಬಿಡುವರೊ ಅವರೇನು ಒಳ್ಳೆ ಕೆಲಸ ಮಾಡಿದಂತಾಗಲಿಲ್ಲೆಂದು ನೀವು ನಿಷೇಧಿಸಿರುವಿರಿ. ಈ ಬಗೆಯ ನಿಮ್ಮ ಅಭಿಪ್ರಾಯ ತಪ್ಪಲ್ಲವೆ?

ಉತ್ತರ– ನಾನು ಹೇಳಿದ್ದರಲ್ಲಿ ನನಗೆ ಯಾವದೇ ತಪ್ಪು ಕಾಣುವುದಿಲ್ಲ. ಎರಡನೆಯ ವರ ಅನುಕರಣ ಮಾಡುವುದಕ್ಕಾಗಿ ಯಾವನೊಬ್ಬ ಮನುಷ್ಯ ತನ್ನ ರೂಢಿಯನ್ನು ಬದಲಿಸಿದರೆ ಅದೇ ಬಗೆಯ ಅನುಕರಣದಿಂದ ಅವನು ತನ್ನ ಮೊದಲಿನ ರೂಢಿಗೇ ಬರುವ ಸಂಭವವುಂಟು. ಪೂರ್ಣ ಸಾಧಕ ಬಾಧಕ ವಿಚಾರ ಮಾಡದೆ ಯಾವುದನ್ನೂ ಮಾಡಬಾರದೆಂಬುದೆ ನಾನು ಹೇಳಿದುದರ ಉದ್ದೇಶ. ವಿಚಾರ ಮಾಡದೆ ಅನುಕರಣ ಮಾಡುವುದೆಂದರೆ ಸಣ್ಣ ಮನುಷ್ಯರ ಹುಡುಗಾಟವು. ಅದರಿಂದ ಮನುಷ್ಯನು ತಗ್ಗಿನಲ್ಲಿ ಬಿದ್ದು ದುರಂತ ಪರಿಣಾಮಗಳನ್ನು ಅನುಭವಿಸಬೇಕಾಗುವುದು.

ಹೊಸದಿಲ್ಲಿ ಮೋ. ಕ. ಗಾಂಧಿ,
೨೧-೬-೪೬

(ಹರಿಜನಬಂಧುವಿನಿಂದ)

## ನೂಲಿನ ವಿನಿಮಯ

ಬಾರಡೋಲಿ ಹತ್ತಿರಿನ ಮಾಢಿಯಲ್ಲಿ ತಾವು ಮಾಡಿದ ಕಾರ್ಯದ ವರದಿಯನ್ನು ಶ್ರೀಮತಿ ಅನ್ನಪೂರ್ಣಾದೇವಿಯವರು ಇಂತು ಕಳಿಸುತ್ತಾರೆ.

"ಈ ಸಣ್ಣ ಹಳ್ಳಿಯಲ್ಲಿ ಬಾಲಿಕೆಯರಿಗಾಗಿ ನಾನು ಕಾರ್ಯ ಮಾಡಲು ಪ್ರಯತ್ನಿಸುತಿದ್ದೇನೆ, ಅವರ ಕುಟುಂಬದ ಜನರೊಡನೆ ಸಂಪರ್ಕ ಬೆಳೆಸಬೇಕೆಂದು ನನ್ನ ಪ್ರಯತ್ನ. ಆದರೆ ಶ್ರೀ ಜಗತರಾಮರು ಹೆಚ್ಚು ವಿಶಾಲ ಕ್ಷೇತ್ರದಲ್ಲಿ ಕೆಲಸ ಮಾಡಲು ನನಗೆ ಒತ್ತಾಯಪಡಿಸಿದಾಗ ನನಗೆ ಸ್ವಲ್ಪ ಸಂದೇಹವುಂಟಾಯಿತು. ಆದರೆ ನಿಮ್ಮಿಂದ ಪತ್ರ ಬಂದ ಬಳಿಕ ನನಗೆ ಉತ್ತೇಜನ ಸಿಕ್ಕಂತಾಯಿತು ಮತ್ತು ಆತ್ಮವಿಶ್ವಾಸವುಂಟಾಯಿತು.

"ನನಗೆ ಕೆಲ ಒಳ್ಳೆ ಜನರೊಡನೆ ಸಂಪರ್ಕವುಂಟಾಗಿದೆ. ಅವರು ನನ್ನ ಮಾತನ್ನು ಕೇಳತಕ್ಕವರು

—ಪುಟ ೧೧ಕ್ಕೆ

# ವಾರದ ಪತ್ರ

ಪತ್ರಿಕಾ ಪ್ರತಿನಿಧಿ ಮಹಾಶಯರ ಅದಮ್ಯವಾದ-ಮತ್ತು ಹೊಣೆಗೆಟ್ಟ ಎನ್ನೋಣವೆ-ಚಟುವಟಿಕೆಗಳ ಫಲವಾಗಿ ರಾಜಧಾನಿಯೆಂಬುದು ಈ ವಾರದಲ್ಲಿ ಊಹಾಪೋಹ, ಗಾಳಿಸುದ್ದಿ, ಸುಳ್ಳು ಭಯಗಳ ಕುದಿಯುವ ಕಾವಲಿಯಾಗಿ ಬಿಟ್ಟಿತು. ನಿಮ್ಮನ್ನೂ ನಿಮ್ಮ ಧ್ಯೇಯವನ್ನೂ ಈ ಸರಿಯಾದ ಪತ್ರಿಕಾ ವ್ಯವಸಾಯದಲ್ಲಿ ಪ್ರಸಕ್ತರಾಗಿ ಕೇಡಿಗೆ ಗುರಿ ಮಾಡಬೇಡಿರೆಂದು ಗಾಂಧೀಜಿ ಎಷ್ಟೋ ಸಲ ಪತ್ರಿಕಾ ಪ್ರತಿನಿಧಿಗಳಿಗೆ ಬಿನ್ನವಿಸಿಕೊಳ್ಳಬೇಕಾಯಿತು. "ವಾಯಿಸರಾಯರ ಸ್ಥಾನದಲ್ಲಿ ನನ್ನನ್ನು ಒಂದೇಒಂದು ದಿನಕ್ಕಾಗಿ ಸರ್ವಾಧಿಕಾರಿಯನ್ನಾಗಿ ನೇಮಿಸಿದ್ದರೆ ನಾನು ಎಲ್ಲ ವೃತ್ತ ಪತ್ರಿಕೆಗಳನ್ನೂ ನಿಲ್ಲಿಸಿ ಬಿಡುತಿದ್ದೆ," ಎಂದು ಒಂದು ಪ್ರಸಂಗದಲ್ಲಿ ಅವರು ಹೇಳಿದರು. "ಹರಿಜನವನ್ನೊಂದು ಹೊರತು ಮಾತ್ರ!" ಎಂದು ಕಣ್ಣು ಮಿಟುಕಿಸಿ ನಸುನಕ್ಕು ಕುಂಟು ನುಡಿ ಸೇರಿಸದೆ ಬಿಡಲಿಲ್ಲ. ಅದೇ ಲಹರಿಯಲ್ಲಿ ಮುಂದುವರಿಯುತ್ತ ಅವರು, ತಮ್ಮ ಹರಿಜನ ಪತ್ರಿಕೆಯ ಹೆಸರು ಬದಲಾಯಿಸಬೇಕಾದ ಪ್ರಸಂಗ ಬಂದಿದ್ದರೆ, ತಾವು ಅದಕ್ಕೆ "ಹರಿಜನ" ವೆಂದು ಹೆಸರಿಡದೆ "ಭಂಗಿ" ಯೆಂದು ಕರೆಯುತ್ತಿದ್ದೆವೆಂದುಸುರಿದರು "ಭಂಗಿ" ತಮ್ಮ ಸದ್ಯದ ಮನೋಭಾವಕ್ಕೂ ಕಾಲಸ್ಥಿತಿಗೂ ತಮ್ಮೆಣಿಕೆಯಂತೆ ಅದೀಗ ತಕ್ಕ ಹೆಸರೆಂದು ಅವರ ಅನಿಸಿಕೆ. ಇಂಥ ಹೊಣೆಗೆಟ್ಟ ಪತ್ರಿಕಾ ವ್ಯವಸಾಯಗಾರರಿಂದಾಗಬಹುದಾದ ಅಪಾರಹಾನಿಗೆ ಉದಾಹರಣೆಕೊಡುತ್ತ ಕಾಂಗ್ರೆಸ್ ಕಾರ್ಯಸಮಿತಿಯ ಚಿಂತನೆಗಳಲ್ಲಿ ಅವರು ವಹಿಸಿದ ಪಾತ್ರವನ್ನು ಕುರಿತು ಪತ್ರಿಕೆಗಳಲ್ಲಿ ಬಂದದ್ದನ್ನೆಲ್ಲ ಜನರು ನಂಬಿದರೆ, ಹಿಂದುಗಳು ಅವರನ್ನು ತಮ್ಮ ಹಿತಸಂಬಂಧದ ಶತ್ರುವೆಂದು ಪರಿಗಣಿಸುವದು ನ್ಯಾಯವಾದೀತು, ಎಂದು ಅವರು ಬೊಟ್ಟಿಟ್ಟು ತೋರಿದರು. ಅದೇ ಪ್ರಕಾರ ಕಾರ್ಯಸಮಿತಿಯಲ್ಲಿ ಪಟಪೂರಿ ದನಿ ಅವರದೊಬ್ಬರದೇ ಎಂದು ತೋರಬಹುದು. ಇದೆಲ್ಲ ಶುದ್ಧ ಕಪೋಲಕಲ್ಪನೆ. ಅದನ್ನು ಮನಸಿನಿಂದ ತಳ್ಳಿಬಿಡಿರೆಂದು ಅವರು ಕೋರಿದರು. ಸುದ್ದಿಗಾರರು ತಮ್ಮ ಲೇಖನಿಯನ್ನು ಸಿಕ್ಕಂತೆ ಹರಿಬಿಡದೆ ಸಂಯಮಿಸಿ ಬರೆಯಬೇಕೆಂದು ಅವರು ಬಯಸಿದರು. ತಪ್ಪಿದರೆ ತಮ್ಮಲ್ಲಿರುವ ಬಿಸಿ ಸುದ್ದಿಗಳ ಆತುರನ್ನು ಹರಿದೊಗೆದು, ಅಂಥವುಗಳನ್ನು ಪ್ರಕಟಿಸುವ ಪತ್ರಿಕೆಗಳಿಗೆ ಆಶ್ರಯ ಕೊಡುವದನ್ನು ನಿಲ್ಲಿಸಬೇಕು. ಕಡಿಮೆಯೆಂದರೆ ಅವುಗಳಲ್ಲಿ ಬರುವ ಸುದ್ದಿಗಳಿಂದ ತಪ್ಪು ತಿಳಿವಳಿಕೆ ಮಾಡಿಕೊಳ್ಳದಂತೆ ಎಚ್ಚರಾಗಿರಬೇಕು.

"ಕುತೂಹಲದಲ್ಲಿ ಎರಡು ಬಗೆ" ಎಂದು ಅವರು ಇನ್ನೊಂದು ಸಂದರ್ಭದಲ್ಲಿ ಹೇಳಿದರು. "ಒಂದು ಸತ್ ಇನ್ನೊಂದು ಅಸತ್" ಹೆಜ್ಜೆಹೆಜ್ಜೆಗೂ ತನ್ನ ಕರ್ತವ್ಯವನ್ನು ಅರಿತುಕೊಳ್ಳುವ ಕುತೂಹಲ ಯಾವಾಗಲೂ ನಮ್ಮಲ್ಲಿರಬೇಕು ಅದರೆ ಸುದ್ದಿಗಾಗಿ ಮನಸು ಪಡುವ ತುರಿಕೆ ಅಥವಾ ತಿಂಡಿ ಒಂದು ಬಗೆಯ ಮಾನಸಿಕ ರೋಗ. ಅದನ್ನು ಸರಿಯಾಗಿ ಹಿಡಿತದಲ್ಲಿಡದಿದ್ದರೆ ಮನಸನ್ನೂ ಆತ್ಮವನ್ನೂ ಬಲಹೀನವಾಗಿ ಮಾಡಬಹುದು."

## ಅಪಪ್ರಚಾರ ಸತ್ರ

ಮಂತ್ರಿತ್ರಯ ಸೂಚನೆಗಳ ವಿಷಯದಲ್ಲಿ ಶೀಘ್ರ ನಿರ್ಣಯಕ್ಕೆ ಬರಬೇಕೆಂದು ಕಾಂಗ್ರೆಸ್ಸು ಅವಸರ ಪಡುತಿದ್ದರೂ ಕೆಲವು ಪತ್ರಿಕೆಗಳ ಅಪಪ್ರಚಾರ ಸತ್ರದಿಂದ ತಪ್ಪಿಸಿಕೊಳ್ಳಲು ಅದರಿಂದಾಗಲಿಲ್ಲ ವಿಲಂಬಕ ಧೋರಣೆ ಕಾಲಯಾಪನೆಗಳ ಆರೋಪವನ್ನು ಅದರ ಮೇಲೆ ಹೊರಿಸಲಾಗಿದೆ. ಈ ಥಾಟ ಬೇಸರಕ್ಕಿಟ್ಟ ಮೇಲೆ ಕಾರ್ಯಸಮಿತಿಯಲ್ಲಿದ್ದ ಭಿನ್ನಾಭಿಪ್ರಾಯಗಳೇ ವಿಲಂಬದ ಕಾರಣವೆಂದು ತಿಳಿಸಲಾಯಿತು. ಈ ಬಗೆಯ ಸುಳ್ಳು ಸುದ್ದಿಗಳನ್ನು ಬಯಲಿಗೆಳೆದು ಗಾಂಧೀಜಿ ತಮ್ಮ ಪ್ರಾರ್ಥನಾ ಸಭೆಯೊಂದರಲ್ಲಿ, ಕೊನೆಯ ನಿರ್ಣಯಕ್ಕೆ ಬರಲು ತಡವಾದುದು ಕಾಂಗ್ರೆಸ ಕಾರ್ಯಸಮಿತಿಯಲ್ಲಿರುವ ಭಿನ್ನಾಭಿಪ್ರಾಯಗಳ ಕಾರಣದಿಂದ ಎಂಬುದು ಕೇವಲ ಅಸತ್ಯವೆಂದು ಸಾರಿದರು. ಜೀವಂತ ಸಂಸ್ಥೆಗಳಲ್ಲಿ ಅಭಿಪ್ರಾಯಭೇದಗಳಿರುವದು ಸ್ವಾಭಾವಿಕ ಕಾಂಗ್ರೆಸ್ ಕಾರ್ಯಸಮಿತಿಯ ಕೊನೆಯ ನಿರ್ಣಯ ಎಂತಾಗಬಹುದೆಂಬುದು ತಮಗೇ ಗೊತ್ತಿಲ್ಲವೆಂದವರು ಕಾಂಗ್ರೆಸ್ ಸದಸ್ಯರಲ್ಲಿ ಮುಸ್ಲಿಮರಿಗಿಂತ ಹಿಂದೂಗಳ ಸಂಖ್ಯೆಯೇ ಹಿಂದುಸ್ತಾನದಲ್ಲಿ ವಿಶೇಷವಾಗಿರುವದರಿಂದ. ಆದರೆ ಕಲ್ಪನೆಯನ್ನು ಎಷ್ಟು ದೂರ ಎಳೆದಾಡಿದರೂ ಕಾಂಗ್ರೆಸ್ಸನ್ನು ಹಿಂದೂ ಸಂಸ್ಥೆಯೆಂದು ಹೇಳುವದು ಸಾಧ್ಯವಿಲ್ಲ. ಅದರ ಅಧ್ಯಕ್ಷ ಮೌಲಾನಾ ಅಝಾದರು ಅಧ್ಯಕ್ಷಪಟ್ಟವನ್ನು ಕಾಂಗ್ರೆಸ್ ಇತಿಹಾಸದಲ್ಲಿ ಬೇರಾರಿಗಿಂತಲೂ ಹೆಚ್ಚುಕಾಲ ಆಳಿದ್ದಾರೆ. ಕಾಂಗ್ರೆಸ್ಸಿಗರೆಂದು ಹೇಳಿಕೊಳ್ಳುವವರೆಲ್ಲ ಅವರಲ್ಲಿ ಸಮಾನ ಗೌರವವನ್ನು ಇರಿಸಿದ್ದಾರೆ. ಕಾಂಗ್ರೆಸ್ಸು ಯಾವುದೊಂದು ವಿಶಿಷ್ಟ ಜಾತಿಯ ವಿಶ್ವಸ್ತವೆಂದು ಹುಟ್ಟಿರದೆ ಸಮಸ್ತ ಭಾರತದ ವಿಶ್ವಸ್ತವಾಗಿ ರಚಿಸಲ್ಪಟ್ಟಿದೆ. ಅಂಥ ಸಂಸ್ಥೆಯಲ್ಲಿ ಅಲ್ಪ ಸಂಖ್ಯಾಕ ಮತ್ತು ಹಿಂದುಳಿದ ವರ್ಗಗಳಗೋಸುಗ ತ್ಯಾಗಮಾಡುವದು ಬಹುಸಂಖ್ಯಾಕ ವರ್ಗಗಳ ಕರ್ತವ್ಯವಾಗುತ್ತದೆ. ಈ ತ್ಯಾಗವನ್ನು ಆಶ್ರಯದಾತೃತ್ವದ ಹೆಮ್ಮೆಯಿಂದ ಮಾಡದೆ ಉದಾತ್ತ ರೀತಿಯಿಂದ ಕರ್ತವ್ಯ ಬುದ್ಧಿಯಿಂದ ಮಾಡಬೇಕಾಗುವದು. "ಕಾಂಗ್ರೆಸ್ಸಿನ ದೃಷ್ಟಿಯಲ್ಲಿ ಹಿಂದುಗಳು, ಮುಸ್ಲಿಮರು, ಪಾರ್ಸಿಗಳು, ಕ್ರಿಶ್ಚನರು, ಸೀಖರು ಎಲ್ಲರೂ ಹಿಂದೀಯರೂ, ಅಂತೆಯೇ ಅದರ ಜನಕ್ಕೆ ಸಮಾನವಾದ ಹಕ್ಕುಳ್ಳವರು ಕಾಂಗ್ರೆಸ್ಸಿನ ಹತ್ತಿರ ಅಹಿಂಸೆಯ ಹೊರತು ಬೇರಾವ ಬಲವಿಲ್ಲ. ವಾಯಿಸರಾಯರಿಗಿರುವಂತೆ ಬ್ರಿಟಿಶ ಸಾಮ್ರಾಜ್ಯದ ಸಮಸ್ತ ಸಶಸ್ತ್ರ ಬಲಗಳ ಬೆಂಬಲ ಕಾಂಗ್ರೆಸ ಅಧ್ಯಕ್ಷರಿಗಿಲ್ಲವಾಗಿ ಅವರು ಹಿಂದುಸ್ತಾನದ ಸ್ವಾತಂತ್ರ್ಯೇಚ್ಛೆಯನ್ನು ಕಾರ್ಯಕ್ಕಿಳಿಸಬೇಕಾದರೆ ಎಲ್ಲ ಜಾತಿ-ವರ್ಗಗಳ ಏಕ ಮತ್ತು ಅಭಿನ್ನ ಇಚ್ಛೆಯನ್ನು ಮಾತ್ರ ಅವಲಂಬಿಸಬಲ್ಲರು. ಅದ್ದರಿಂದಲೆ, ಕೇಂದ್ರದಲ್ಲಿ ಅಧಿಕಾರ ಗ್ರಹಣ ಮಾಡಬೇಕಾದರೆ ತನಗೆ ಎಲ್ಲ ಜಾತಿಗಳ ಸರ್ವಾನುಮತ ಸೌಹಾರ್ದ ಸಿಕ್ಕಲಬೇಕೆಂದು ಕಾರ್ಯ ಸಮಿತಿಯ ಆತುರ. ಅದು ಕಾರಣವೇ ವಿವಿಧ ಹಿತಸಂಬಂಧಗಳ ಬಗ್ಗೆ ಅದು ಚಿಂತಿಸುತ್ತದೆ. ಇದೀಗ ಬಹಳ ಪೇಚಾಟದ ಕೆಲಸ. ನಡುಗಾಲ ಸರಕಾರವನ್ನು ನಮ್ಮ ನಮ್ಮಲ್ಲಿಯ ಜಗಳಗಳ ಕಣವಾಗಿ ಮಾಡಲು ಇಚ್ಛೆಯಿಲ್ಲ

## ದಕ್ಷಿಣ ಆಫ್ರಿಕೆ

ದಕ್ಷಿಣ ಆಫ್ರಿಕೆಯಲ್ಲಿ ನಡೆಯುತಿರುವ ವೀರ ಸಂಗ್ರಾಮ ಗಾಂಧೀಜಿಯ ಪ್ರಾರ್ಥನೋತ್ತರ ಭಾಷಣಗಳ ವಸ್ತುವಾಗಿ ಬಿಟ್ಟಿದೆ. ನಮ್ಮ ದೇಶದ ಮತ್ತು ಜನರ ಅನಾಹುತಕ್ಕೆ ಕಾರಣವಾದ ಪ್ರತ್ಯೇಕೀಕರಣದ ಈ ಧೋರಣೆಗೆ ಇನ್ನೂ ನಮ್ರರಾಗಿ ತಲೆವಾಗುತ್ತ ಹೋದರೆ ದೇವ- ಮಾನವರಿಬ್ಬರಿಗೂ ಅಪರಾಧ ಮಾಡಿದಂತಾಗುವದೆಂದು ನಮ್ಮ ಹೇಳಿಕೆ," ಎಂದು ಎಪ್ರೀಲ ೨೧, ೧೯೪೬ ಕ್ಕೆ ಟ್ರಾನ್ಸವಾಲ ಹಿಂದೀ ಕಾಂಗ್ರೆಸ್ಸಿನ ಜೊಹಾನ್ಸಬರ್ಗ ಸಭೆಯಲ್ಲಿ ಅಂಗೀಕೃತವಾದ ಸತ್ಯಾಗ್ರಹ ಗೊತ್ತುವಳಿ ಸಾರುತ್ತದೆ: "ಈ ಚಳವಳಿಯ ಮೂಲಾಧಾರ ಅಹಿಂಸೆ. ಈ ಹೋರಾಟ ಪ್ರತ್ಯೇಕೀಕರಣದ ಧೋರಣಕ್ಕೆ ವಿರುದ್ಧವಾಗಿ ಹೂಡಲ್ಪಟ್ಟಿದೆ ಹೊರತು ಈ ದೇಶದ ಬಿಳಿ ಜಾತಿಯ ವಿರುದ್ಧವಲ್ಲ. ಇದನ್ನು ನೆನಪಿಡಬೇಕಾಗಿದೆ."

ಈ ಹೋರಾಟಕ್ಕೆ ದಕ್ಷಿಣ ಆಫ್ರಿಕೆಯ ನಿಗ್ರೋ ಜನಾಂಗದ ಪೂರ್ಣ ಸಹಾನುಭೂತಿ ದೊರೆತಿದೆ. ದಕ್ಷಿಣ ಆಫ್ರಿಕಾ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರು ಟ್ರಾನ್ಸವಾಲ ಹಿಂದೀ ಕಾಂಗ್ರೆಸ್ಸಿನ ಪ್ರಚಂಡ ಸಭೆಯಲ್ಲಿ ಘೋಷಿಸಿದ್ದು:

"ನಾವು ಆಫ್ರಿಕನ್ನರು ಈ ಅಮಾನುಷ ಕಾಯಿದೆಯ ವಿರುದ್ಧ ಹಿಂದೀಯರು ಹೂಡಿರುವ ಹೋರಾಟದಲ್ಲಿ ಸಹಾನು ಭೂತಿಯುಳ್ಳವರಾಗಿದ್ದೇವೆ ಮಾತ್ರವಲ್ಲ ಅದಕ್ಕೆ ಕೈಲಾದ ಬೆಂಬಲ ಸಹಾಯಗಳನ್ನೂ ನೀಡುವೆವು."

"ನಿನ್ನೆ ಆಫ್ರಿಕನ್ನರ ಸರದಿಯಿತ್ತು, ಇಂದು ಹಿಂದೀಯರ ಸರದಿ ಬಂದಿದೆ, ನಾಳೆ ಶ್ವೇತೇತರ ಜನಾಂಗಗಳ ಸರತಿ ಬಂದೀತು ವರ್ಣದ್ವೇಷದ ಈ ಧೋರಣೆಯ ಕೊನೆ ಎಲ್ಲಿ ನಿಲ್ಲುವದೆಂಬ ನಿಯಮವಿಲ್ಲ."

ದಿನಪತ್ರಿಕೆಗಳಲ್ಲಿ ವರದಿಯಾದ ಈ ಹೋರಾಟದ ಘಟನೆಗಳನ್ನು ಪ್ರಸ್ತಾಪಿಸಿ ಗಾಂಧೀಜಿ ಪ್ರಾರ್ಥನಾ ಸಭೆಯಲ್ಲಿ ೨೧-೬-೪೬ ಕ್ಕೆ ದಕ್ಷಿಣ ಆಫ್ರಿಕೆಯ ಬಿಳಿಯರು ಸ್ವೇಚ್ಛಾಚಾರಿಗಳಾಗಿ ಕಾಯಿದೆಯ ನಿಯಾಮಕರು ತಾವೇ ಎಂಬಂತೆ ಸತ್ಯಾಗ್ರಹಿಗಳನ್ನು ಹೇಗೆ ಕಾಡುತಿರುವರೆಂದು ವಿವರಿಸಿದರು. "ಯೂನಿಯನ್ ಸರಕಾರ ಸುಮ್ಮನೆ ನೋಡುತಿರುವಂತೆ ತೋರುತ್ತದೆ. ಇದು ಅನ್ಯಾಯ. ಅನ್ಯಾಯವಾದ ಕಾಯಿದೆಯನ್ನು ಪಾಸು ಮಾಡಿದ್ದೇ ಸಾಲದೆ ಆ ಕಾಯದೆಯನ್ನು ಅಮಲಿನಲ್ಲಿ ತರಲು ಬಿಳಿಯರಿಗೆ ಸ್ವಾತಂತ್ರ್ಯ ಕೊಟ್ಟಿದ್ದಕ್ಕಿಂತ ದೊಡ್ಡ ಕೆಡಕು ಬೇರೊಂದಿಲ್ಲ. ತಮಗಿಂತ ಹಿಂದೀಯರು ಏತರಲ್ಲೂ ಕಡಿಮೆಯಲ್ಲವೆಂದು ಬಿಳಿಯರು ತಿಳಿದುಕೊಳ್ಳುವದು ಅವಶ್ಯ. ಹಿಂದೀಯರು ಪ್ರತ್ಯೇಕೀಕರಣಕ್ಕೆ ತಲೆವಾಗಲಾರರು, ಬಾಗಲೊಪ್ಪರು."

ಕೆಲ ಬಿಳಿಯರು ನಿತ್ಯವೂ ಹಿಂದೀಯರ ಡೇರೆಗಳ ಮೇಲೇರಿ ಹೋಗಿ ಅವರನ್ನು ಬೆದರಿಸುತಿದ್ದಾರೆಂದು ಗಾಂಧೀಜಿ ಹೇಳಿದರು. ಸತ್ಯಾಗ್ರಹಿಗಳಲ್ಲಿ ಸ್ತ್ರೀಯರೂ ಇದ್ದಾರೆ. ನಿಮ್ಮೊಡನೆ ಉಳಿದು ನಿಮಗೆ ಬಂದ ಆಪತ್ತುಗಳನ್ನು 'ನಾವೂ ಅನುಭವಿಸುವೆವೆಂದು ಆ ವೀರ ಸ್ತ್ರೀಯರು ಪುರುಷರಿಗೆ ಹೇಳಿದ್ದಾರೆ.

"ಸತ್ಯಾಗ್ರಹಿಗಳು ಪಾತಕಿಗಳಲ್ಲ. ಅವರು ಗೌರವಾರ್ಹ ನಾಗರಿಕರು. ಸ್ವಾಭಿಮಾನಿಗಳಾದ ಅವರು ನಿರ್ಬಂಧಿತ ಪ್ರದೇಶಗಳಲ್ಲಿ ಪ್ರತ್ಯೇಕವಾಗಿ ಬಾಳುವದರ ಬದಲು ಸೆರೆಮನೆ ಹೋಗುವದೇ ಲೇಸೆನ್ನುತ್ತಾರೆ. ಅನ್ಯಾಯ ದಬ್ಬಾಳಿಕೆಗಳನ್ನು ಅವರು ಕೊನೆಯ ಉಸಿರು ಇರುವವರೆಗೂ ಹೋರುವರು. ದಕ್ಷಿಣಾಫ್ರಿಕೆಯ ಸರಕಾರ ಶಾಸನ ಮುರಿದುದಕ್ಕೆ ಅವರಿಗೆ ಶಿಕ್ಷೆ ವಿಧಿಸಬೇಕು, ಇಲ್ಲವೆ ಮನುಷ್ಯತ್ವ ನಿಯಮಕ್ಕೆ ವಿರುದ್ಧವಾದ ಪ್ರತ್ಯೇಕೀಕರಣ ಕಾಯಿದೆಯನ್ನು ತೆಗೆದುಹಾಕಬೇಕು ಅದರೆ ಚಿತ್ರಹಿಂಸೆಯ ಪದ್ಧತಿಯನ್ನು ದ. ಆಫ್ರಿಕೆಯ ಆಚರಣೆಗೆ ಬರಗೊಟ್ಟರೆ ಅದು ಬಿಳಿ ನಾಗರಿಕತೆಯ ಇತಿಹಾಸದಲ್ಲಿ ಕರಾಲ ಕಲಂಕವಾಗಿ ಉಳಿಯುವದು." ದಕ್ಷಿಣ ಆಫ್ರಿಕೆಯ ಸರಕಾರವೂ ಮಾನವಜಾತಿಯ ನಾಗರಿಕ ಮನಸ್ಸಾಕ್ಷಿಯೂ ಇಂಥ ಪ್ರಸಂಗಕ್ಕೆ ಅವಕಾಶ ಕೊಡಲಿಕ್ಕಿಲ್ಲವೆಂದು ಗಾಂಧೀಜಿ ಹಾರೈಸಿದರು.

ಇನ್ನೊಂದು ಪ್ರಾರ್ಥನಾ ಭಾಷಣದಲ್ಲಿ 'ಇಂದು ದಕ್ಷಿಣ ಆಫ್ರಿಕೆಯಲ್ಲಿ ನಡೆಯುತಿರುವದು, ದಂಡಿನ ಕಾಯಿದೆಗಿಂತಲೂ ಕೀಳಾದುದು," ಎಂದು ಗಾಂಧೀಜಿ ಹೇಳಿದರು. "ದಕ್ಷಿಣ ಆಫ್ರಿಕೆಯ ಬಿಳಿಯರ ವಿರುದ್ಧ ನಿಮ್ಮನ್ನು ಸಿಟ್ಟಿಗೆಬ್ಬಿಸಬೇಕೆಂದು ನಾನಿದನ್ನು ಹೇಳುತ್ತಿಲ್ಲ. ನಾವು ಸಿಟ್ಟಿಗೆದ್ದರೆ ಪ್ರಾರ್ಥನೆಗೆ ಕುಳಿತುಕೊಳ್ಳಲು ಅಯೋಗ್ಯರಾಗುತ್ತೇವೆ" ಪ್ರಾರ್ಥನೆಗೆ ಸೇರಿದವರೆಲ್ಲರೂ ಮನೆಗೆ ಹೋಗಿ, ದಕ್ಷಿಣ ಆಫ್ರಿಕೆಯಲ್ಲಿ ಹಿಂದುಸ್ತಾನದ ಗೌರವಕ್ಕಾಗಿ ಹೋರಾಡುತಿರುವ ಬಂಧುಭಗಿನಿಯರಿಗೆ ಎಲ್ಲ ಕಷ್ಟ ನಿಷ್ಠುರಗಳನ್ನು ಧೀರತನದಿಂದ ಎದುರಿಸುವ ಶಕ್ತಿಯನ್ನು ಕೊಡೆಂದು ಮಾತ್ರವಲ್ಲ, ದಕ್ಷಿಣ ಆಫ್ರಿಕೆಯ ಬಿಳಿಯರು ಮಾನವರಿಗೆ ಶೋಭಿಸದ ರೀತಿಯಲ್ಲಿ ಆಚರಿಸುತಿರುವದನ್ನು ಬಿಡುವಂತೆ ಅವರಿಗೆ ಜ್ಞಾನೋದಯ ಮಾಡಿಸಿ ಅಲ್ಲಿಯ ಸರಕಾರದ ಕಣ್ಣು ತೆರೆದು ಅವರು ಹಿಂದೀಯರನ್ನು ಮಾನವ ಬಾಂಧವರಂತೆ ನಡೆಸಿಕೊಳ್ಳುವ ಹಾಗೆ ಮಾಡೆಂದು ಪರಮಾತ್ಮನಲ್ಲಿ ಪ್ರಾರ್ಥಿಸಬೇಕೆಂದು ಗಾಂಧೀಜಿ ಬಯಸಿದರು. ದಕ್ಷಿಣ ಆಫ್ರಿಕೆಯ ಬಿಳಿಯರೂ ಒಂದೇ ದೇವರ ಮಕ್ಕಳಾಗಿರುವದರಿಂದ ನಮ್ಮ ಬಂಧುಗಳೇ ಸರಿ.

ಹಿಂದುಸ್ತಾನದ ವ್ಯವಹಾರವೆಲ್ಲ ನಮ್ಮ ಕೈಯಲ್ಲಿಯೆ ಸೇರಿದ ನಂತರ ಇಂಥ ಸಂಗತಿಗಳು ಅಸಂಭವವಾಗುವವೆಂದು ಗಾಂಧೀಜಿ ಕೊನೆಗೊಳಿಸಿದರು. ಸತ್ಯ ಅಹಿಂಸೆಗಳಿಗೆ ದೀಕ್ಷಾಬದ್ಧವಾದ ಹಿಂದುಸ್ತಾನ ದಕ್ಷಿಣ ಆಫ್ರಿಕೆಯ ನಿವಾಸಿಗಳಿಗೆ ಶಾಂತಿಯ ಪಾಠವನ್ನು ಕಲಿಸೀತು. ಆದರೆ ಸ್ವತಂತ್ರ ಹಿಂದುಸ್ತಾನ ಶಾಂತಿ ಮಾರ್ಗವನ್ನು ಅವಲಂಬಿಸಬೇಕೋ ಖಡ್ಗಧಾರೆಯನ್ನೋ ಎಂಬುದರ ನಿರ್ಣಾಯಕರು ಜನರು ಮತ್ತು ಕಾಂಗ್ರೆಸ್ಸು. ೪೦ ಕೋಟಿ ರಾಷ್ಟ್ರಗಳು ಮಾನವ ಜಾತಿಯ ಅಮೂಲ್ಯ ಸಂಸ್ಕೃತಿಪರಂಪರೆಯನ್ನು ಹಾಳುಗೆಡಹಿದ್ದೇ ಸಾಕು. ೪೦ ಕೋಟಿ ಜನಸಂಖ್ಯೆಯುಳ್ಳ ಒಂದು ಉಪಖಂಡವೇ ಮದ್ದುಗುಂಡುಗಳಿಗೆ ಶರಣು ಹೋಗಿ ಅಪಾಯಕರ ಜೀವನವನ್ನು ಕೈಕೊಂಡರೆ ಅದು ಅತ್ಯಂತ ಭಯಾನಕವೇ ಸರಿ.

ಹೊಸದಿಲ್ಲಿ — ಪ್ಯಾರೇಲಾಲ
೨೪—೬—೪೬

ಉಳಿದುದು---

ಒಮ್ಮೆಗಂತೂ ಭಯ ನಿರಾಧಾರವೆಂದು ಸಿದ್ಧವಾಯಿತು. ಘಟನಾ ಸಮಿತಿಯ ಹುರಿಯಾಳುಗಳ ಆಯ್ಕೆಯ ವಿಷಯದಲ್ಲಿ ಹೊರಡಿಸಲ್ಪಟ್ಟ ಸೂಚನೆಗಳು ಮಂತ್ರಿತ್ರಯ ಯೋಜನೆಯ ೧೯ ನೆ ಕಲಮಿನಲ್ಲಿ ಉಕ್ತವಾದ ಯಾವ ವಿಷಯಕ್ಕೂ ಹುರಿಯಾಳುಗಳನ್ನು ಬದ್ಧರಾಗಿ ಮಾಡಲಾರದೆಂದು ಪತ್ರಿಕೆಗಳಲ್ಲಿ ಪ್ರಕಟವಾದ ಅರ್ಧ-ಸರಕಾರಿ ಪ್ರಕಟನೆಯ ಕಡೆಗೆ ನಿನ್ನೆ ಪ್ರಾರ್ಥನಾ ಕಾಲದಲ್ಲಿ ಗಾಂಧೀಜಿ ಸಭಿಕರ ಲಕ್ಷವನ್ನು ಸೆಳೆದರು.-ತಮ್ಮ ಆದಿತ್ಯವಾರದ ಭಾಷಣಕ್ಕಿಂತ ಮೊದಲೇ ಅದನ್ನು ತಾವು ನೋಡಲಾರದೆ ಹೋದೆವಲ್ಲ, ಎಂದು ಅವರು ಪಶ್ಚಾತ್ತಾಪ ವ್ಯಕ್ತಗೊಳಿಸಿದರು. ಆ ಮಟ್ಟಿಗೆ ತಮ್ಮ ಭಯ ನಿರಾಧಾರವಾದುದೆಂದು ಸಿದ್ಧವಾದುದಕ್ಕೆ ಅವರು ಸಂತೋಷಪಟ್ಟರು. ಎಷ್ಟೇ ಪ್ರಾಮಾಣಿಕವಾಗಿದ್ದರೂ ಹೀಗೆ ತಪ್ಪುತಿಳಿದುಕೊಂಡದ್ದಕ್ಕಾಗಿ ಮಂತ್ರಿ ಪ್ರತಿನಿಧಿಗಳಿಂದ ಕ್ಷಮಾಪಣೆ ಕೇಳುವದು ತಮ್ಮ ಕರ್ತವ್ಯವೆಂದು ಅವರು ಸಾರಿದರು.

ಅದೇ ಪ್ರಾರ್ಥನಾ ಸಭೆಯಲ್ಲಿ ಗಾಂಧೀಜಿಯವರು ಕಾಂಗ್ರೆಸ ಕಾರ್ಯಕಾರಿ ಸಮಿತಿಯ ಚರ್ಚೆಗಳನ್ನು ಕುರಿತು ಪತ್ರಿಕೆಗಳಲ್ಲಿ ಪ್ರಸಿದ್ಧವಾಗಿರುವ ವರದಿಯ ಪ್ರಸ್ತಾಪ ಎತ್ತಿದರು ನಡುಗಾಲ ಸರಕಾರದ ರಚನೆಯ ಯೋಜನೆಯನ್ನು ಕಾರ್ಯಸಮಿತಿ ನಿರಾಕರಿಸಲು ನಿರ್ಣಯಿಸಿದ್ದು ನಿಜ. ಅದರೆ ಘಟನಾ ಸಮಿತಿಯಲ್ಲಿ ಪ್ರವೇಶಿಸಲು ಅದು ನಿರ್ಧರಿಸಿದೆ. ಘಟನಾ ಸಮಿತಿಯ ಯೋಜನೆಯಲ್ಲಿ ಅನೇಕ ಲೋಪದೋಷಗಳಿವೆ. ಅದರೂ ಅದು ಜನತೆಯೆ ಆರಿಸಿದ ಪ್ರತಿನಿಧಿಗಳಿಂದ ಕೂಡಿರುವದೆಂದು ವಾದಿಸಿ, ಎಲ್ಲ ಅಂಗಗಳನ್ನೂ ಪರಿಶೀಲಿಸಿದ ನಂತರ ಆ ಯೋಜನೆಯನ್ನು ತಿರಸ್ಕರಿಸಬಾರದೆಂದು ಕಾರ್ಯಸಮಿತಿ ನಿರ್ಣಯ ಮಾಡಿತು, ಎಂದು ಅವರು ಹೇಳಿದರು.

ಕಾರ್ಯಸಮಿತಿ ಈ ನಿರ್ಣಯವನ್ನು ತಮ್ಮ ಪ್ರಬಲ ವಿರೋಧವಿದ್ದರೂ ಸ್ವೀಕರಿಸಿತೆಂದೂ ಪತ್ರಿಕೆಗಳಲ್ಲಿ ವರದಿ ಬಂದಿದೆಯೆಂದು ಗಾಂಧೀಜಿ ಮುಂದುವರಿಸಿದರು. ಅದೊಂದು ತಪ್ಪು ಅಭಿಪ್ರಾಯ ಹುಟ್ಟಿಸುವ ಹೇಳಿಕೆ. ವಸ್ತುಸ್ಥಿತಿ ಹೇಳಬೇಕೆಂದರೆ ನನ್ನ ಮನಸ್ಸು ಈಗ ನಾಲ್ಕೈದು ದಿನಗಳಿಂದ ಯಾವುದೋ ಒಂದು ಅಸ್ಫುಟ ಆಶಂಕೆಯಿಂದ ತುಂಬಿಹೋಗಿದೆ. ಮುಂಚೆ ಬೆಳಕು ಕಾಣುತ್ತಿದ್ದಲ್ಲಿ ಈಗ ನನಗೆ ಕತ್ತಲು ಕಾಣುತ್ತದೆ. ಕತ್ತಲೆ ಕಾಣಿಸುವದು ಪರಮಾತ್ಮನಲ್ಲಿ ವಿಶ್ವಾಸದ ಅಭಾವದ ಲಕ್ಷಣವೆಂದು ನನಗೆ ಗೊತ್ತು. ಯಾವಾತನ ಸಮಸ್ತ ದೇಹವೂ ಪರಮಾತ್ಮಮಯವಾಗಿರುವದೋ ಅವನಿಗೆ ಕತ್ತಲೆಯ ಅನುಭವವೇ ಆಗಬಾರದು.

ಅದು ಹೇಗೇ ಇರಲಿ, ಸದ್ಯಕ್ಕಂತೂ ತಮಗೆ ಬೆಳಕು ಕಾಣಿಸುವದಿಲ್ಲವೆಂದು ಗಾಂಧೀಜಿ ಹೇಳಿದರು. ಅದಕ್ಕೂ ಹೆಚ್ಚಾಗಿ ಅವರು ತಮ್ಮ ಭಯಗಳಿಗೆ ಕಾರಣ ಕೊಡಲು ಅಥವಾ ಅವುಗಳನ್ನು ವಿವರಿಸಲು ಅಸಮರ್ಥರಾಗಿದ್ದರು. ಅದ್ದರಿಂದ ಅವರು ತಮ್ಮ ಭಯವನ್ನು ಕಾರ್ಯ ಸಮಿತಿಯ ಮುಂದಿರಿಸಿ, ತಮ್ಮನ್ನು ಬಿಟ್ಟು ಸ್ವತಂತ್ರವಾಗಿಯೇ ಅದು ನಿರ್ಣಯಿಸಬೇಕೆಂದು ಸೂಚಿಸಿದ್ದರು. ದೇಶದ ಮುಂದಾಳ್ತನ ವಹಿಸಿದವರು ಇನ್ನೊಬ್ಬನ ಅಕಾರಣ ಭಾವನೆಗಳಿಂದ ಮಾರ್ಗದರ್ಶನ ಪಡೆಯುವದು ನ್ಯಾಯ್ಯವಾಗದು. ಸ್ವತಂತ್ರವಾಗಿ ಚಿಂತಿಸಿ ಇತರರನ್ನು ತರ್ಕದಿಂದ ಮನಗಾಣಿಸುವ ಶಕ್ತಿಯಿಲ್ಲದವರು ದೇಶದ ಅದೃಷ್ಟವನ್ನು ಕೈಹಿಡಿದು ನಡೆಸಲಾರರು. ಕಾರ್ಯಸಮಿತಿಯ ಸದಸ್ಯರು ರಾಷ್ಟ್ರದ ಸೇವಕರು. ಯಾರ ಸೇವೆ ಮಾಡಲು ಅವರು ಪ್ರಯತ್ನಿಸುವರೋ ಆ ಜನರ ಒಪ್ಪಿಗೆಯ ಹೊರತು ಬೇರೊಂದು ಹಿಂಬಲ ಅವರ ಹತ್ತಿರ ಇಲ್ಲ. ಜನರು ಅವರನ್ನು ಬೇಕಾದಾಗ ತಳ್ಳಿಹಾಕಬಲ್ಲರು. ಅದ್ದರಿಂದ ಕಾರ್ಯಸಮಿತಿಯ ಮಾರ್ಗದರ್ಶನವನ್ನು ಅನುಸರಿಸಿ ಜನರು ಸಾಗಬೇಕೆಂದು ಗಾಂಧೀಜಿಯ ಸಲಹೆಯಿದೆ. "ನನಗೆ ಬೆಳಕು ಕಂಡಾಗ ನಾನು ನಿಮಗೆ ಹೇಳುವೆ. ಅದರೆ ಎಷ್ಟು ಕಾಲ ಯಾವುದೊಂದು ವಿಷಯದಲ್ಲಿ ನನ್ನ ಸುತ್ತ ಕತ್ತಲೆ ಹಬ್ಬಿದೆಯೊ ಅಷ್ಟು ಕಾಲ ನನ್ನ ಹಿಂದೆ ಯಾರೂ ಬರಬಾರದು."





## ಕಾಂಗ್ರೆಸ್ಸು ಮಾಡಿದ್ದೇನು ?

ಗುಜರಾಥದ ಹರಿಜನನೊಬ್ಬ ಬರೆಯುತ್ತಾನೆ:-

ಹಿಂದುಸ್ತಾನದಲ್ಲಿ ಮುಸ್ಲಿಂ ಲೀಗ ಮತ್ತು ಕಾಂಗ್ರೆಸ ಎಂಬ ಎರಡು ಪಕ್ಷಗಳೇ ಇವೆಂಬುದಾಗಿ ಚುನಾವಣೆಗಳು ಸಿದ್ಧಪಡಿಸಿವೆ. ಹರಿಜನರಲ್ಲಿ ಬಹುಸಂಖ್ಯಾಕರು ಕಾಂಗ್ರೆಸ್ಸಿಗೆ ಅನುಕೂಲರಾಗಿರುವರೆಂಬುದನ್ನು ಚುನಾವಣೆಗಳು ಸಿದ್ಧಪಡಿಸಿವೆ. ಆಂಬೇಡಕರ ಪಕ್ಷದವರು ಬಹಳ ಕಡಿಮೆ ಸ್ಥಳಗಳನ್ನು ಪಡೆದಿರುವರು. ಕಾಂಗ್ರೆಸ್ಸಿನಲ್ಲಿ ಕಾಂಗ್ರೆಸ ಹರಿಜನರ ಸ್ಥಾನಮಾನಗಳೇನು ? ಕಾಂಗ್ರೆಸ್ಸಿನ ಬೇರೆ ಬೇರೆ ಸಮಿತಿಗಳ ಚುನಾವಣೆಗಳಿಗೆ ಹರಿಜನರನ್ನು ಏಕೆ ನಿಲ್ಲಿಸಲಿಲ್ಲ ? ಅವರು ಚುನಾವಣೆಗೆ ನಿಂತಾಗ ಸವರ್ಣ ಹಿಂದುಗಳು ಅವರನ್ನು ವಿರೋಧಿಸಿದ್ದೇಕೆ ? ಸವರ್ಣ ಹಿಂದುಗಳು ಹೆಚ್ಚು ಸಮರ್ಥರಿರುವರೆಂದು ಹರಿಜನರನ್ನು ಹೊರಗಿಡುವದು ಸರಿಯೆ ? ಕಾಂಗ್ರೆಸ್ಸು ಹರಿಜನರಿಗಾಗಿ ಬಹಳ ದಿನಗಳಿಂದ ಕಾರ್ಯಮಾಡುತ್ತ ಬಂದಿದೆ ಅವರನ್ನು ಸಾಕಷ್ಟು ಸುಶಿಕ್ಷಿತ ಮಾಡಿ ಸಮರ್ಥರನ್ನಾಗಿ ಮಾಡುವಲ್ಲಿ ಕಾಂಗ್ರೆಸ್ಸು ಅದೇಕೆ ಯಶಸ್ವಿಯಾಗಿಲ್ಲ? "

ಈ ಪತ್ರದಲ್ಲಿ ಅಜ್ಞಾನ ಮತ್ತು ಚುಚ್ಚು ಇವೆ. ಅವು ಕ್ಷಮ್ಯವಾಗಿರುವವು. ಅದರಲ್ಲಡಕವಾಗಿರುವ ರಹಸ್ಯವನ್ನು ನಾವು ತಿಳಿದುಕೊಳ್ಳಬೇಕು. ಕಾಂಗ್ರೆಸ್ಸು ಇಷ್ಟೊಂದು ಹರಿಜನ ಸ್ಥಳಗಳನ್ನು ಪಡೆದಿದೆಂಬುದೆ ಅದು ಹರಿಜನ ಸೇವೆ ಮಾಡಿ ಅವರ ವಿಶ್ವಾಸ ಸಂಪಾದಿಸಿದೆಂಬುದಕ್ಕೆ ಸಾಕ್ಷಿಯಾಗಿದೆ. ಹಿಂದು ಧರ್ಮದಲ್ಲಿಯ ಹಿಂದು ಸಮಾಜದಲ್ಲಿಯ ಅವಿಭಾಜ್ಯ ಘಟಕಗಳು ಅವರು. ಈ ಘಟಕವು ಹೋದರೆ ಇಲ್ಲವೆ ಹಿಂದು ಧರ್ಮ ಅಥವಾ ಹಿಂದು ಸಮಾಜವನ್ನು ಬಿಟ್ಟುಹೋದರೆ ಹಿಂದೂ ಧರ್ಮವೇ ನಾಶ ಹೊಂದುವುದು. ಸವರ್ಣ ಹಿಂದುಗಳು ಮಾಡಬೇಕಾದಷ್ಟು ಕಾರ್ಯವನ್ನು ಹರಿಜನರ ಸಲುವಾಗಿ ಮಾಡಿಲ್ಲೆಂಬುದನ್ನು ತಿಳಿಸುವುದೆ ಈ ಪತ್ರ ಲೇಖಕರ ಉದ್ದೇಶ. ಸವರ್ಣ ಹಿಂದುಗಳು ಭಂಗಿಗಲಾದರೆ ಅವರಲ್ಲಿ ಮತ್ತು ಭಂಗಿಗಳಲ್ಲಿಯ ಭೇದವು ತಾನಾಗಿಯೆ ಮಾಯವಾಗುವದು. ಹರಿಜನರಲ್ಲಿಯೆ ವಿವಿಧ ಉಪ ಜಾತಿಗಳಿವೆ. ಅವುಗಳೆಲ್ಲ ಅಳಿಯಲಿಕ್ಕೆ ಬೇಕು. ಎಲ್ಲರೂ ಒಂದೇ ಧರ್ಮದವರು ಅಂದರೆ ಭಂಗಿಗಳಾಗಬೇಕು. ಭಂಗಿಯೆಂದರೆ ಇಡೀ ಮಾನವ ಜಾತಿಯ ಸೇವಕ. ಕೇವಲ ಹಿಂದುಗಳ ಸೇವಕನಲ್ಲ. ಈ ರೀತಿ ಭಂಗಿಗಳು ನಾವಾದರೆ ಎಲ್ಲ ಭೇದಗಳು ತಾವಾಗಿಯೆ ಮಾಯವಾಗುವವು. ಎಲ್ಲರೂ ಸೇವಕರಾದರೆ ಒಡೆಯರಾರಾಗಬೇಕು ?

ಅದ್ದರಿಂದ ಇದು ಕೇವಲ ಕನಸು, ಒಂದು ಮನೋರಥ ಅದರೆ ಯಾವ ಸಮಾಜವೂ ಕೇವಲ ಕನಸು ಇಲ್ಲವೆ ಬಯಕೆಯನ್ನಿಟ್ಟುಕೊಂಡು ಬಾಳಲಾರದು. ಅದು ನಿಶ್ಚಿತ ಕಾರ್ಯವನ್ನು ಮಾಡಬೇಕಾಗುವದು. ಕಾಂಗ್ರೆಸ್ಸು ಜಾತಿಮತಗಳನ್ನೆಣಿಸುವದಿಲ್ಲ. ಹಿಂದುಗಳಾಗಲಿ ಮುಸಲ್ಮಾನರಾಗಲಿ ಇಲ್ಲವೆ ಬೇರೆ ಯಾವದೇ ಜಾತಿಯವರಾಗಲಿ ಕಾಂಗ್ರೆಸ್ಸಿನ ದೃಷ್ಟಿಯಿಂದ ಸಮಾನರೆ. ಅದುದರಿಂದ ಕೆಳಗೆ ಬಿದ್ದವರನ್ನು ಮೇಲಕ್ಕೆತ್ತುವದು ಮೇಲೆ ಕುಳಿತವರನ್ನು ಕೆಳಗಿಳಿಸುವದು ಮತ್ತು ಯಾರು ಪಾತಾಳದಲ್ಲಿ ಹೋಗಿ ಬಿದ್ದಿರುವರೊ ಅವರನ್ನು ಭೂಮಿಗೆ ತರುವದು ಕಾಂಗ್ರೆಸ್ಸಿನ ಕರ್ತವ್ಯ ಹೊಣೆ. ಎಲ್ಲರನ್ನೂ ಸಮಾನ ಸ್ಥಳಕ್ಕೆ ತಂದು ನಿಲ್ಲಿಸುವದು ಕಾಂಗ್ರೆಸ್ಸಿನ ಕಾರ್ಯ. ಇದರಲ್ಲಿ ಮಧ್ಯಮಾರ್ಗವು ಸಿಕ್ಕುವುದು. ಯಾರಿಗೂ ಹಿಮಾಲಯದ ಎತ್ತರ ಸ್ಥಳದಲ್ಲಿರಬೇಕಾಗಿಲ್ಲ.ಇಲ್ಲವೆ ಕೆಳಗೆ ಪಾತಾಳದಲ್ಲಿ. ಎಲ್ಲರೂ ಈ ಸುಂದರ ಭೂಮಿಯಲ್ಲಿ ವಾಸಿಸತಕ್ಕವರು. ಎಲ್ಲರಿಗೂ ಸಮಾನತೆಯನ್ನು ಕಲ್ಪಿಸಿಕೊಡುವದೆ ಕಾಂಗ್ರೆಸ್ಸಿನ ಪ್ರತಿಜ್ಞೆ. ಅದರೆ ಅದಿನ್ನೂ ಸಾಧ್ಯವಾಗಿಲ್ಲ. ಅದು ಎಲ್ಲಿಯ ವರೆಗೆ ಸಾಧ್ಯವಾಗುವದಿಲ್ಲವೊ ಅಲ್ಲಿಯ ವರೆಗೆ ಹರಿಜನರಿಗೆ ತಕರಾರು ಮಾಡಲು ಬಲಿಷ್ಠ ಕಾರಣ ಉಳಿದ ಉಳಿಯುವದು.

ಪತ್ರಲೇಖಕನಿಗೆ ನಾನು ಹೀಗೆ ಹೇಳಬಯಸುವೆನು. ಇಂಥ ಸುಂದರ ಹಸ್ತಾಕ್ಷರದಲ್ಲಿ ಇವರು ಈ ಪತ್ರ ಬರೆದಿರುವರೊ ಅದು ಯಾರ ಸಹಾಯದಿಂದ? ಹರಿಜನರಿಗಾಗಿ ಕಾಂಗ್ರೆಸ್ಸಿನ ಹೊರತು ಬೇರೆಯರ ಸಂಸ್ಥೆ ಹೆಚ್ಚು ಕಾರ್ಯ ಮಾಡಿದೆ ? ಮಾಡತಕ್ಕದ್ದನ್ನೆಲ್ಲ ಕಾಂಗ್ರೆಸ್ಸು ಮಾಡಿಲ್ಲೆಂಬುದು ನಿಜ. ಮಾಡತಕ್ಕದ್ದು ಇನ್ನೂ ಬಹಳಿದೆ. ಕಾಂಗ್ರೆಸಿನಷ್ಟು ಬೇರೆ ಯಾವ ಸಂಸ್ಥೆಯೂ ಹರಿಜನ ಕಾರ್ಯವನ್ನು ಮಾಡಿಲ್ಲೆಂಬುದೂ ಅಷ್ಟೇ ಸತ್ಯಪೂರ್ಣವಾಗಿದೆ. ಅದುದರಿಂದ ಹರಿಜನರು ತಾಳ್ಮೆಯಿಂದಿರಬೇಕು. ತಾಳ್ಮೆಗಾದರೂ ಒಂದು ಮರ್ಯಾದೆಯಿದೆಂಬುದರಲ್ಲಿ ಸಂದೇಹವಿಲ್ಲ. ಅದರೆ ಆ ಮರ್ಯಾದೆಯನ್ನು ಇನ್ನೂ ಮುಟ್ಟಿರುವದಿಲ್ಲ.

ಹೊಸದಿಲ್ಲಿ ಮೋ. ಕ. ಗಾಂಧಿ
೧೭-೬-೪೬

(ಹರಿಜನ ಬಂಧುವಿನಿಂದ)

## ನೆಲಗಡಲೆಯ ಉಪಯೋಗ

ಡಾ. ಎ. ಟಿ. ಡಬ್ಲು ಸಿಮನ್ಸರು ನೆಲಗಡಲೆಯ ಬಗೆಗೆ ಬರೆದ ಸುದೀರ್ಘ ಲೇಖದ ಸಾರವಿದು.

ನಮ್ಮ ಜನರು ಇಷ್ಟೊಂದು ದುರ್ಬಲರಾಗುವುದಕ್ಕೆ ನಮ್ಮ ಆಹಾರಪದಾರ್ಥದಲ್ಲಿ ಪಿಷ್ಟ ಅಹಾರ ಸತ್ವಕ್ಷಾರಗಳ ಕೊರತೆಯೆ ಮುಖ್ಯ ಕಾರಣವೆಂದ ಅವರು ಅಭಿಪ್ರಾಯ ಪಡುತ್ತಾರೆ. ಬಂಗಾಲ ಬರಗಾಲದ ಕಾಲಕ್ಕೆ ಉಪವಾಸ ಬಳಲುವ ಮನುಷ್ಯನ ಪ್ರಾಣವನ್ನುಳಿಸುವುದಕ್ಕಾಗಿ ಗಂಜಿಗಿಂತಪಿಷ್ಟವನ್ನೆ ಹೆಚ್ಚಾಗಿ ಉಪಯೋಗಿಸಬೇಕಾಯಿತೆಂದು ಸಿದ್ಧವಾಗಿದೆ. ಹೆಚ್ಚು ಪಿಷ್ಟವನ್ನು ಕೊಟ್ಟುದಾದರೆ ಉಳಿದ ಧಾನ್ಯಗಳನ್ನು ಕೊಡುವುದಕ್ಕಿಂತ ಹೆಚ್ಚು ಪೌಷ್ಟಿಕ ಪದಾರ್ಥಗಳನ್ನು ಕೊಟ್ಟಂತಾಗುವುದು. ನೆಲಗಡಲೆ ಹಿಟ್ಟಿನಲ್ಲಿ ೫೦% ಕ್ಕಿಂತ ಹೆಚ್ಚು ಪಿಷ್ಟಸತ್ವವಿರುತ್ತದೆ. ಉಳಿದ ಯಾವದೇ ಪಲ್ಲೆಕಾಯಿಗಳಲ್ಲಿರುವ ಸತ್ವಕ್ಕಿಂತ ಹೆಚ್ಚು ಪಿಷ್ಟಸತ್ವ ಅದರಲ್ಲಿರುತ್ತದೆ. ಹಾಗು ಅದು ತಿನ್ನುವ ಪದಾರ್ಥವಿರುತ್ತದೆ. ಒಂದು ಎಕರೆ ಭೂಮಿಯಲ್ಲಿ ಬಿತ್ತಿದ ಗೋದಿ, ಸಣ್ಣ ಧಾನ್ಯಗಳು ಮತ್ತು ಬತ್ತದಿಂದ ಬರುವ ಪಿಷ್ಟಪದಾರ್ಥಕ್ಕಿಂತ ಹೆಚ್ಚು ಪಿಷ್ಟಸತ್ವ ಸಿಕ್ಕುತ್ತದೆ. ಹೀಗಿದ್ದರೂ ನಾವು ನೆಲಗಡಲೆಯ ಪೂರ್ಣ ಉಪಯೋಗ ಮಾಡುವುದಿಲ್ಲ. ನೆಲಗಡಲೆಯಲ್ಲಿ ೪೫% ಕೇವಲ ಎಣ್ಣೆಗಾಗಿ ಉಪಯೋಗಿಸಲಾಗುತ್ತದೆ. ಉಳಿದ ೫೫% ರ ಗತಿಯೇನು ? ಇಡೀ ಕಾಯಿಯನ್ನೆ ನಾವು ತಿನ್ನುವುದಾದರೆ ಎಣ್ಣೆ ತೆಗೆದುಳಿದದ್ದನ್ನು ನಾವೇಕೆ ತಿನ್ನಬಾರದು ? ಏಕೆಂದರೆ ನಮ್ಮ ದನಗಳ ಹಿಂಡಿಗಾಗಿ ಅದು ಬೇಕಾಗುತ್ತದೆ ಮತ್ತು ನಮ್ಮ ಕಬ್ಬಿನ ಹೊಲಗಳಿಗೆ ಮತ್ತು ಬತ್ತದ ಗದ್ದೆಗಳಿಗೆ ಗೊಬ್ಬರ ಹಾಕುವುದಕ್ಕಾಗಿ ಆ ಹಿಂಡಿಬೇಕೆಂದು ನಮ್ಮ ಅರ್ಥಶಾಸ್ತ್ರ ವಿಶಾರದರು ಉತ್ತರಿಸುತ್ತಾರೆ. ನಮ್ಮ ಹೊಲಗಳ ಸತ್ವವನ್ನು ಹೆಚ್ಚಿಸುವುದಕ್ಕಾಗಿ ತಿನ್ನಲಿಕ್ಕೆ ಉಪಯೋಗವಿಲ್ಲದ ಶಗಣಿ ಹೊಲಸು ಅಥವಾ ಪಕ್ಷಿವಿಷ್ಟದಂಥ ಪದಾರ್ಥಗಳು ಸಿಕ್ಕುತಿರುವಾಗ ತಿನ್ನಲಿಕ್ಕೆ ಬರುವಂಥ ಇಂಥ ಪಿಷ್ಟಸತ್ವಗಳನ್ನು ಅದಕ್ಕಾಗಿ ಉಪಯೋಗಿಸುವುದೆಂದರೆ ಹಾಳುಮಾಡಿದ ಅಪರಾಧ ಮಾಡಿದಂತೆಯೇ ಎಂದು ಡಾ. ಸಿಮನ್ಸರು ಪ್ರತಿಪಾದಿಸುತ್ತಾರೆ. ಕಬ್ಬಿನ ಹೊಲಗಳನ್ನು ಸತ್ವಯುತ ಮಾಡುವುದಕ್ಕಾಗಿ ನಾವು ನೆಲಗಡಲೆ ಹಿಂಡಿಯನ್ನುಪಯೋಗಿಸುವುದಾದರೆ ನಾವು ಹೊಲದಲ್ಲಿ ಬಿತ್ತಿದಪಿಷ್ಟಸತ್ವವೆಲ್ಲ ಹಾಳಾದಂತೆಯೆ ಏಕೆಂದರೆ ಕಬ್ಬಿನಲ್ಲಿ ಪಿಷ್ಟ ಸತ್ವವೆ ಇರುವುದಿಲ್ಲ. ಈ ಪಿಷ್ಟ ಸತ್ವವನ್ನಲ್ಲದೆ ಹಿಂಡಿಯಲ್ಲುಳಿದ ೧೦% [ಎಣ್ಣೆ ಪೌಷ್ಟಿಕಸತ್ವ ಮತ್ತು ಕ್ಷಾರದ ಹಾನಿಯು ಬೇರೆ. ಹಿಂಡುವ ದನಗಳಿಗೂ ನಾವು ಹಿಂಡಿಯನ್ನು ಹಾಕುತ್ತೇವೆ. ಇದರಿಂದ ಹಾಲಿನ ಉತ್ಪತ್ತಿ ಹೆಚ್ಚುತ್ತದೆ. ಹಾಲು ಅತ್ಯುತ್ತಮವಾದ ಅಹಾರ ಪದಾರ್ಥ. ಅದರೆ ಒಂದು ಆಕಳಿಗೆ ೧೦ ಪೌಂಡಿನಷ್ಟು ನೆಲಗಡಲೆ ಪಿಷ್ಟವನ್ನು ನಾವು ಕೊಟ್ಟರೆ ಅದರಿಂದ ಕನಿಷ್ಠ ಅರ್ಧ ಪೌಂಡಿನಷ್ಟಾದರೂ ಹಾಲಿನ ಪಿಷ್ಟವು ಬರುವದೋ ಇಲ್ಲವೋ ಸಂಶಯ. ಹತ್ತಿಕಾಳು ಮೊದಲಾದ ತಿನ್ನಲಿಕ್ಕೆ ಬಾರದಂಥ ಪದಾರ್ಥಗಳಿಂದ ಇಷ್ಟೇ ಲಾಭ ದೊರೆಯಲಿರುವಾಗ ನೆಲಗಡಲೆಯಂಥ ತಿನ್ನುವ ಪದಾರ್ಥವನ್ನು ಹಾಳು ಮಾಡುವುದು ಸರಿಯೆ ; ಎಂಬುದು ವಿಚಾರ ಮಾಡತಕ್ಕ ವಿಷಯವಾಗಿದೆ.

ಪ್ರೊ ಬಿ. ಜಿ. ಎಸ್. ಆಚಾರ್ಯರು ನಿಯಂತ್ರಿತ ರೀತಿಯಿಂದ ಇಲ್ಲಿಯ ಆಹಾರದ ಪ್ರಯೋಗಗಳನ್ನು ನಡೆಸಿದ ನಂತರ ನೆಲಗಡಲೆ ಪಿಷ್ಟವು ಪ್ರಾಣಿಸತ್ವದ ದೃಷ್ಟಿಯಿಂದ ಬಹಳ ಮಹತ್ವದ ಸತ್ವವೆಂದು ಕಂಡುಹಿಡಿದರೆಂದು ಡಾ. ಸಿಮನ್ಸರು ಉಲ್ಲೇಖಿಸುತ್ತಾರೆ. ನೆಲಗಡಲೆ ಪಿಷ್ಟವು ಬಹಳ ಪಾಚಕವೆಂದು ಕಂಡುಬಂದಿದೆಂದು ಅವರು ಹೇಳುತ್ತಾರೆ. ಅದು ಹೆಂತದ ನೊರೆಯಲ್ಲಿರುವ ಪಿಷ್ಟದಷ್ಟು ಸತ್ವಯುತವಾಗಿದ್ದು ಹಾಲು ಮತ್ತು ಮಾಂಸದಲ್ಲಿ ಸಿಕ್ಕುವ ಪ್ರಾಣಿಪಿಷ್ಟದಷ್ಟು ಸತ್ವಯುತವೆಂದು ಅವರ ಅಭಿಪ್ರಾಯ.

ಸ್ವಚ್ಛ ನೆಲಗಡಲೆ ಹಿಂಡಿಯಲ್ಲಿ ೫೦% ಕ್ಕಿಂತ ಹೆಚ್ಚು ಒಳ್ಳೆ ಪಿಷ್ಟ ೧೩% ಕ್ಕಿಂತ ಹೆಚ್ಚು ಮಾಂಸವಿರುತ್ತದೆ. ಅದುದರಿಂದ ಹೊಲದಲ್ಲಿ ಹಾಕಿದ ಪ್ರತಿಯೊಂದು ಟನ್ ಹಿಂಡಿಯಿಂದ ೩೦ ಕುರಿ ಹಿಂಡಿನ, ೫೦ ಸಾವಿರ ತತ್ತಿಗಳ ಇಲ್ಲವೆ ೧೫೦೦೦ ಶೇರು ಹಾಲಿನಲ್ಲಿದ್ದಷ್ಟು ಪೌಷ್ಟಿಕ ಪಿಷ್ಟವನ್ನು ಹಾಳುಮಾಡಿದಂತಾಗುತ್ತದೆ.

ಈ ಪಿಷ್ಟಸತ್ವವಲ್ಲದೆ ನೆಲಗಡಲೆಯಲ್ಲಿ ಕೊಬ್ಬು ಗಂಜಿ ಮತ್ತು ಖನಿಜ ದ್ರವ್ಯಗಳು ಇರುವವು. ಅದುದರಿಂದ ಸ್ವಲ್ಪ ಹೆಚ್ಚಾಗಿ ಗಂಜಿ ಮತ್ತು ಸಿ ಸತ್ವವನ್ನು ಕೂಡಿಸಿದ್ದಾದರೆ ಅದೊಂದು ಪರಿಪೂರ್ಣ ಆಹಾರವೆ ಆಗುವುದು. ಜನತೆಯ ಆರೋಗ್ಯ ಮತ್ತು ಆಯುಷ್ಯಾಭಿವೃದ್ಧಿಯ ಮೇಲೆ ಅತ್ಯಂತ ಮಹತ್ವದ ಪರಿಣಾಮವನ್ನುಂಟುಮಾಡುವ ಸತ್ವವು ಹಿಂದುಸ್ತಾನದಲ್ಲಿ ಬಹಳ ಕಡಿಮೆಯಿದೆಂದು ಕಂಡುಬಂದಿದೆ. ನೆಲಗಡಲೆಯು ಈ ಸತ್ವದಿಂದ ತುಂಬಿದ್ದಾಗಿದೆ. ವಿಶೇಷತಃ ಬಿ ಸತ್ವವು ಅದರಲ್ಲಿ ಹೆಚ್ಚಿಗಿದೆ. ಅತಿ ಮಹತ್ವದ 'ನಿಕೊಟ್ರಿನಿಕ್ ಆಸಿಡ್ ಮತ್ತು ರಿಬ್ಲೊಫ್ಲಾವಿನ್‌ಗಳು ಅದರಲ್ಲಿ ಬಹಳಿರುತ್ತವೆ. ಕೊಲ್ಹಾಪುರದ ಒಂದು ದೂರದ ಹಳ್ಳಿಯಲ್ಲಿ ಪಾದ್ರಿಗಳಾಗಿರುವ ಶ್ರೀ ಕಿಂಕೇಡರು ತಮ್ಮ ಶಾಲೆಯ ಹುಡುಗರು ನೆಲಗಡಲೆಯನ್ನು ಕೈಗಾಣದಲ್ಲಿ ಹಿಂಡಿತೆಗೆದ ಹಿಂಡಿಯನ್ನು ತಿಂದು ಬಹಳ ಉತ್ತೇಜಿತರಾಗಿರುವರೆಂದು ಕಂಡುಹಿಡಿದಿದ್ದಾರೆ. ಹಳ್ಳಿಗರೂ ಈ ಬಗ್ಗೆ ಇದ್ದ ಪೂರ್ವಗ್ರಹವನ್ನು ಬಿಟ್ಟುಗೊಟ್ಟರುವರು. ತಮ್ಮ ನಿತ್ಯದ ಸಣ್ಣ ಧಾನ್ಯಗಳ ೧೦-೧೫ ಪ್ರಮಾಣದಲ್ಲಿ ಅದನ್ನು ಉಪಯೋಗಿಸುತ್ತಾರೆ ಮಧುಮೇಹಿಗಳಿಗೆ ರೊಟ್ಟಿಯ ಹೆಚ್ಚಿನ ಸೀದಾ ಸಿಕ್ಕು ಅವರ 'ಚೈನಿ'ಗೆ ಸಹಾಯವಾಗುವದರಿಂದ ವಿಶೇಷ ಧಾನ್ಯಗಳನ್ನರ್ಪಿಸುತ್ತಾರೆ. ನೆಲಗಡಲೆ ಹಿಟ್ಟನ್ನು ಕೂಡಿಸಿದ ಹಿಟ್ಟಿನಿಂದ ಮಾಡಿದ ರೊಟ್ಟಿಯು ಮಕ್ಕಳಿಗೆ ಬಹಳ ಸೇರುತ್ತವೆ. ಸ್ವಲ್ಪ ಉಪ್ಪು ಅದರಲ್ಲಿ ಕೂಡಿಸಿದ್ದಾದರೆ ವಯಸ್ಕರು ಅದನ್ನು ರುಚಿಮಾಡಿಕೊಂಡು ತಿನ್ನುತ್ತಾರೆ. ಅಪೂಪ ಪದಾರ್ಥಗಳನ್ನು ಮತ್ತು ಮಿಠಾಯಿಗಳನ್ನು ಮಾಡುವದಕ್ಕಾಗಿಯೂ ನೆಲಗಡಲೆ ಹಿಟ್ಟನ್ನು ಉಪಯೋಗಿಸಬಹುದಾಗಿದೆ.

ವ್ಯಾಪಾರಿ ನೆಲಗಡಲೆಯ ನಿಯಂತ್ರಿತ ಧಾರಣೆ ಟನ್ನಿಗೆ ೭೫ ರೂಪಾಯಿಯಿದೆ. ತಿನ್ನಲಿಕ್ಕೆ ಬರುವಂಥ ನೆಲಗಡಲೆ ಬೆಲೆ ಇದಕ್ಕೂ ಸ್ವಲ್ಪ ಹೆಚ್ಚು. ವ್ಯಾಪಾರಿ ನೆಲಗಡಲೆ ಧಾರಣೆಗಿಂತ ಈ ಧಾರಣೆ ಹೆಚ್ಚಿಗಿದ್ದರೂ ಉಳಿದ ಸಣ್ಣ ಧಾನ್ಯಗಳ ಧಾರಣೆಗಿಂತ ಅದು ಬಹಳ ಕಡಿಮೆ ಇರುವದೆಂದು ಡಾ. ಸೀಮನ್ಸರ ಅಭಿಪ್ರಾಯ.

ಹಿಂಡಿಯನ್ನು ತಿನ್ನುವ ಪದಾರ್ಥವನ್ನಾಗಿ ಮಾರ್ಪಡಿಸುವದರಿಂದ ಎಣ್ಣೆಯ ಇಲ್ಲವೆ ನೆಲಗಡಲೆಯ ಪೇಟಿಯ ಮೇಲೆ ಯಾವದೇ ಬಗೆಯ ಪರಿಣಾಮವುಂಟಾಗಲಾರದೆಂದು ಎಣ್ಣೆ ಕಾರಖಾನೆದಾರರ ದೃಷ್ಟಿಯಿಂದಲೂ ಹೇಳಬಹುದು.

ಹಿಂದುಸ್ತಾನದಲ್ಲಿ ೧೫ ಲಕ್ಷ ಟನ್ ನೆಲಗಡಲೆ ಬೆಳೆಯುವದೆಂದು ಅಂದಾಜು. ಈ ಬೆಳೆಯಿಂದ ಇಂತು ೭ ಲಕ್ಷ ಟನ್ ಅತ್ಯುತ್ತಮ ಆಹಾರ ಪದಾರ್ಥವನ್ನು ಜನತೆಗೆ ಸಿಕ್ಕುವಂತೆ ಇದರಿಂದ ಮಾಡಬಹುದು. ೩೫೦೦ ಕೋಟಿ ತತ್ತಿ ಇಲ್ಲವೆ ೧೦೦೦ ಕೋಟಿ ಶೇರು ಹಾಲು ಇಲ್ಲವೆ ೩೦೦ ಲಕ್ಷ ಕುರಿಗಳ ಸತ್ವದಷ್ಟು ಸತ್ವವು ಈ ನೆಲಗಡಲೆ ಹಿಂಡಿಯಲ್ಲಿ ಇರುವದು. ಗಂಜಿ, ಕೊಬ್ಬು, ಖನಿಜ ಮತ್ತು ಪೌಷ್ಟಿಕ ಪದಾರ್ಥಗಳ ವಾರ್ಷಿಕ ಹಾನಿ ಬೇರೆ. ಈ ಮಹತ್ವದ ನೆಲಗಡಲೆಯ ಉಪಯೋಗವನ್ನು ತಪ್ಪಾಗಿ ಮಾಡಹತ್ತಿದ್ದರಿಂದಲೇ ಇಷ್ಟೆಲ್ಲ ಹಾನಿ.

ಹೊಸದಿಲ್ಲಿ ಅ. ಕಾ.
೨೪-೬-೪೬

## ಮಾನವನಿಗೆ ಮಾನವನಿಂದ ಕ್ರೌರ್ಯ

'ಮಾನವನಿಗೆ ಮಾನವನಿಂದಾದ ಕ್ರೌರ್ಯವನ್ನು ಎತ್ತಿಹಿಡಿವ ಕಾಯದೆಯ ಮತ್ತು ನಾಡಿನಾಡಿಗಳಲ್ಲಿ ಛೇದಿಸಿದ ಪೂರ್ವ ಗ್ರಹದ ಸ್ಪಷ್ಟ ಉದಾಹರಣೆ ಪತ್ರಿಕೆಯಲ್ಲಿದೀಗ ಪ್ರಕಟವಾಗಿದೆ. ಜೂನ ೧೨ ನೇ ತಾರೀಕಿನ ಹಿಂದೂ ಪತ್ರಿಕೆಯಲ್ಲಿ ಪ್ರಸಿದ್ಧವಾದುದು, ಇದನ್ನು ಸ್ಪಷ್ಟಪಡಿಸುತ್ತದೆ.

"ಎರಡನೆಯವರ ಭಾವನೆಗಳನ್ನು ನೋಯಿಸುವಂಥ ಕೃತ್ಯ ಮಾಡಿದುದಕ್ಕಾಗಿ ಮದುರೆಯಲ್ಲಿಯ ಇಬ್ಬರು ಹರಿಜನರಿಗೆ ನಾಲ್ಕು ತಿಂಗಳ ಸಶ್ರಮ ಶಿಕ್ಷೆ ವಿಧಿಸಲ್ಪಟ್ಟಿದ್ದರ ಒಂದು ಫೌಜದಾರಿ ಖಟ್ಲೆಯನ್ನುಲ್ಲೇಖಿಸುತ್ತ ಶ್ರೀ ಎ. ವೈದ್ಯನಾಥ ಅಯ್ಯರ ಎಂ. ಎಲ್. ಎ. ಇವರು ಪ್ರಕಟನೆಯೊಂದನ್ನು ಕೊಟ್ಟಿದ್ದಾರೆ. ಅದರಲ್ಲಿ ಅವರು ಹರಿಜನರು ಅಸ್ಪೃಶ್ಯರಾದುದಕ್ಕಾಗಿ ಎಂಥ ಕಠೋರ ಕಷ್ಟವನ್ನು ಸಹಿಸಬೇಕಾಗುತ್ತದೆಂಬ ಬಗ್ಗೆ ಸಾರ್ವಜನಿಕರ ಲಕ್ಷ್ಯವನ್ನೆಳೆದಿದ್ದಾರೆ.

"ಶ್ರೀ ವೈದ್ಯನಾಥ ಅಯ್ಯರರು ಬರೆಯುತ್ತಾರೆ. 'ಮದುರೆಯಲ್ಲಿಯ ಹರಿಜನನೊಬ್ಬನು ತನ್ನ ಹಿರಿಯ ಕೂಸು ಮೃತವಾದಾಗ ಆ ಹೆಣವನ್ನು ಹರಿಜನರ ಸಲುವಾಗಿ ಕಾದಿಟ್ಟ ಸ್ಥಳದಲ್ಲಿ ಹುಗಿಯದೆ ಸವರ್ಣ ಹಿಂದುಗಳಿಗಾಗಿಯೆಂದು . ಪ್ರತ್ಯೇಕವಾಗಿರಿಸಲ್ಪಟ್ಟದ್ದೆಂದು ಹೇಳಲಾಗುತಿರುವ ಮದುರಾ ಮ್ಯುನಸಿಪಲ್ ಸ್ಮಶಾನ ಭೂಮಿಯಲ್ಲಿಯ ಒಂದು ಚಪ್ಪರದಲ್ಲಿ ಹುಗಿದನು. ಈ ಸ್ಥಳವು ಪ್ರತ್ಯೇಕವಾಗಿ ಕಾಯ್ದಿರಿಸಲ್ಪಟ್ಟದೆಂದು ತನಗೆ ಗೊತ್ತಿರಲಿಲ್ಲೆಂದು ಆ ಹರಿಜನನು ಹೇಳುತಿರುವನು. ಆಗ ಹನಿ ಉದುರುತಿತ್ತು. ಮತ್ತು ಆ ಸ್ಥಳವೆ ಅಂತ್ಯವಿಧಿಗೆ ಯೋಗ್ಯವಾದುದೆಂದು ಅವನಿಗೆ ಅನಿಸಿತು. ಯಾವ ಸವರ್ಣ ಹಿಂದುವೂ ಆಕ್ಷೇಪಿಸಲಿಲ್ಲ. ಅಲ್ಲದೆ ಯಾರೊಬ್ಬರ ಭಾವನೆಗಳೂ ನೋಯಿಸಲ್ಪಟ್ಟವೆಂಬುದಕ್ಕೆ ಪುರಾವೆಗಳಿಲ್ಲ. ಈ ಸುದ್ದಿಯು ಮದುರಾ ಪೋಲೀಸರಿಗೆ ಹತ್ತಿದ್ದರಿಂದ ಅವರು ಆ ಕೂಸಿನ ತಂದೆಯ ಮೇಲೆ ಮತ್ತು ಸಮೀಪದ ಆಪ್ತನ ಮೇಲೆ ಖಟ್ಲೆ ಹಾಕಿದರು. ಹರಿಜನರು ಅಸ್ಪೃಶ್ಯರಾದುದರಿಂದ ಈ ಕೃತಿಯಿಂದ ಎರಡನೆಯವರ ಭಾವನೆಗಳು ನೋಯಿಸಲ್ಪಡುವ ಸಂಭವವಿದೆಂಬುದೆ ಅವರ ಮೇಲಿನ ಆರೋಪ. ಎರಡನೆ ವರ್ಗದ ಮ್ಯಾಜಿಸ್ಟ್ರೇಟರು ಆರೋಪಿಗಳಿಗೆ ನಾಲ್ಕು ತಿಂಗಳ ಸಶ್ರಮ ಶಿಕ್ಷೆ ವಿಧಿಸಿದರು. ಅಪೀಲ ಮಾಡಲಾಗಿ ಸಿಟಿ ಮ್ಯಾಜಿಸ್ಟ್ರೇಟರು ಶಿಕ್ಷೆಯನ್ನು ಸ್ಥಿರಗೊಳಿಸಿದರು. ಹರಿಜನರಿಗೆ ಇಲ್ಲವೆ ಅಸ್ಪೃಶ್ಯರಿಗೆ ಸ್ಥಳಿಕ ಸಂಸ್ಥೆಗಳು ಏರ್ಪಡಿಸಿದ ಯಾವದೇ ನಿಯಮಿತ ಸ್ಥಳಗಳಿಗೆ ಹೋಗಬಾರದೆಂದು ನಿರ್ಬಂಧಿಸಲಾಗದೆಂದು ೧೯೩೮ ನೇ ಇಸ್ವಿಯ ಮದ್ರಾಸ ಸಿವಿಲ್ ಡಿಸ್‌ಆ್ಯಬಿಲಿಟೀಜ ರಿಮೂವಲ್ ಆಕ್ಟ ಸಾರುತ್ತದೆಂದೂ ಹರಿಜನರ ಮೇಲೆ ಈ ಬಗ್ಗೆ ನಾಗರಿಕ ಅಸಾಮರ್ಥ್ಯವನ್ನು ತೋರುವ ರೂಢಿ ಇಲ್ಲವೆ ಸಂಪ್ರದಾಯವನ್ನು ಕೋರ್ಟು ಮಾನ್ಯವೆಂದು ಗ್ರಹಿಸಬಾರದೆಂದೂ ಈ ಖಟ್ಲೆಯಲ್ಲಿ ವಾದಿಸಲ್ಪಟ್ಟರೂ ಶಿಕ್ಷೆ ಸ್ಥಿರಪಡಿಸಲಾಯಿತು. ಮದ್ರಾಸ ಮಂತ್ರಿಗಳ ಗಮನಕ್ಕೂ ಈ ಖಟ್ಲೆಯ ಸಂಗತಿಯನ್ನು ತರಲಾಗಿದೆಂದು ಶ್ರೀ ವೈದ್ಯನಾಥ ಅಯ್ಯರರು ಬರೆಯುತ್ತಾರೆ."

ಮದ್ರಾಸ ಮಂತ್ರಿ ಮಂಡಳದವರು ಮಾನವತೆಯ ದೃಷ್ಟಿಯಿಂದ ಮಾಡತಕ್ಕ ಮೊದಲನೆ ಕೆಲಸವೆಂದರೆ ತಮಗಿದ್ದ ದಯೆಯ ಅಧಿಕಾರವನ್ನುಪಯೋಗಿಸಿ ಶಿಕ್ಷೆಯನ್ನು ಕ್ಷಮಿಸಿಬಿಡಬೇಕು. ಮತ್ತು ಅನಂತರ ಕಾಯದೆಯಿಂದ ಶಕ್ಯವಾದರೆ ಸರಕಾರದವರೆ ಹಾಯಕೋರ್ಟಿಗೆ ಅಪೀಲು ಮಾಡಿ ಶಿಕ್ಷೆಯನ್ನು ರದ್ದುಪಡಿಸಿಕೊಳ್ಳಬೇಕು.

ಹೊಸದಿಲ್ಲಿ ಪ್ಯಾರೇಲಾಲ
೨೩-೬-೪೬

# ಒರೆಗಲ್ಲು ಮತ್ತು ಆಹ್ವಾನ

ಶ್ರೀ ಘನಶ್ಯಾಮಸಿಂಗ ಗುಪ್ತರು ಬರೆಯುತ್ತಾರೆ :—

“ತಮ್ಮ ಸಂಬಳವನ್ನು ೪೦೦% ಹೆಚ್ಚಿಸಬೇಕೆಂಬ ಬೇಡಿಕೆ ಮಾನ್ಯವಾಗಲಿಲ್ಲೆಂದು ದುರ್ಗ ಮುನಸಿಪಾಲಿಟಿಯ ಕೆಲಸಗಾರರು ಭಂಗಿಗಳು ಸಹಿತ ೭ ನೇ ತಾರೀಕಿನಿಂದ ಸಂಪು ಹೂಡಿದರು. ಈ ಸಂಪಿನಲ್ಲಿ ಭಂಗಿಗಳನ್ನು ಸೇರಿಸಬೇಡಿರೆಂದು ಕರ್ಮಚಾರಿ ಸಂಘದವರಿಗೆ ಮುನಸಿಪಾಲಿಟಿಯವರು ಬಿನ್ನವಿಸಿಕೊಂಡರು. ಆದರೆ ಆ ವಿನಂತಿಯನ್ನು ಸಂಘದವರು ಮಾನ್ಯಮಾಡಲಿಲ್ಲ. ನಿಷ್ಪಕ್ಷಪಾತ ಪಂಚಾಯತಿಗೆ ಆ ವಿಷಯವನ್ನೊಪ್ಪಿಸುವದಕ್ಕೂ ಅವರು ಸಿದ್ಧರಿರಲಿಲ್ಲ. ಭಂಗಿಗಳೂ ಸಂಪು ಹೂಡುವ ನಿರ್ಧಾರ ಮಾಡಿದ್ದಕ್ಕಾಗಿ ಸ್ವಾಭಾವಿಕವಾಗಿ ಮುನಸಿಪಾಲಿಟಿಯವರು ಪೇಚಿನಲ್ಲಿ ಬಿದ್ದರು.

ಸಾರ್ವಜನಿಕ ಸಭೆಯೊಂದನ್ನು ೭ ನೆಯ ತಾರೀಕಿಗೆ ಕರೆಯಲಾಯಿತು. ಆ ಸಭೆಯಲ್ಲಿ ಮುನಸಿಪಾಲಿಟಿಯ ಅಧ್ಯಕ್ಷರು ಮತ್ತು ಆ ಕರ್ಮಚಾರಿ ಸಂಘದ ಅಧ್ಯಕ್ಷರು ತಮ್ಮ ತಮ್ಮ ಅಭಿಪ್ರಾಯಗಳನ್ನು ಸಾರ್ವಜನಿಕರಿಗೆ ತಿಳಿಸಿ ಹೇಳಿದರು. ನಾನೂ ಆ ಸಭೆಯಲ್ಲಿ ಉಪಸ್ಥಿತನಾಗಿದ್ದೆನು. ನನ್ನ ಅಭಿಪ್ರಾಯದಂತೆ ಕೆಲಸಗಾರರ ಪಕ್ಷ ದುರ್ಬಲವಾಗಿದ್ದರೂ ಮುನಸಿಪಾಲಿಟಿ ಮತ್ತು ಸಂಘದ ನಡುವೆ ಇದ್ದ ವ್ಯಾಜ್ಯದ ವಿಷಯವನ್ನು ವಿಚಾರ ಮಾಡದೆ ನಾಗರಿಕರು ಈ ಮಹತ್ವದ ಕೆಲಸ ಹಾಗೆಯೇ ಸಾಗುವ ಏರ್ಪಾಡು ಮಾಡತಕ್ಕದ್ದೆಂಬದಾಗಿ ಅಭಿಪ್ರಾಯ ಪಟ್ಟೆನು. ನಾಗರಿಕರು ತಾವೇ ಭಂಗಿಗಳ ಕೆಲಸ ಕೈಕೊಂಡು ನಗರದ ಆರೋಗ್ಯ ಪರಿಸ್ಥಿತಿಯನ್ನು ಕಾಯ್ದುಕೊಳ್ಳಬೇಕೆಂದೂ ಹೊರಗಿನಿಂದ ಭಂಗಿಗಳನ್ನು ಕರೆಯಿಸಿಕೊಂಡು ಬಿಕ್ಕಟ್ಟನ್ನು ಹೆಚ್ಚಿಸಿಕೊಳ್ಳಬಾರದೆಂದೂ ನಾನು ಹೇಳಿದೆನು. ಅದರಂತೆ ಹೊರಗಿನಿಂದ ಯಾವದೇ ಬಗೆಯ ಸಹಾಯವನ್ನಪೇಕ್ಷಿಸದೆ ನಾಗರಿಕರೆ ಸ್ವಚ್ಛತೆಯ ಕಾರ್ಯವನ್ನು ಸಾಗಿಸಿದರು. ತತ್ಪರಿಣಾಮವಾಗಿ ನಾಲ್ಕು ದಿನಗಳ ನಂತರ ಸಂಪು ಮುರಿದು ಬಿದ್ದಿತು. ಮತ್ತು ಭಂಗಿಗಳು ಐದನೆಯ ದಿನವೆ ಕೆಲಸಕ್ಕೆ ಬಂದರು. ಈ ಅವಧಿಯಲ್ಲೆಲ್ಲ ಯಾವದೇ ಬಗೆಯ ಘಟನೆಯಾಗಲಿಲ್ಲ. ಸಂಪೂರ್ಣ ಶಾಂತತೆಯಿತ್ತು.

ಸಾರ್ವಜನಿಕ ಸಭೆಯಲ್ಲಿ ಸಂಪು ಕೊನೆಗಂಡಿತೆಂದು ಸಂಘದ ಅಧ್ಯಕ್ಷರು ಸಾರುವಾಗ ನನ್ನ ಮತ್ತು ನನ್ನ ಸಂಗಾತಿಗರನ್ನುಲ್ಲೇಖಿಸಿ ಸಂಪಿನ ಅವಧಿಯಲ್ಲಿ ಭಂಗಿಗಳ ಕಾರ್ಯ ಕೈಕೊಂಡು ಸಂಪುಗಾರರಿಗೆ ಹಿಂಸೆಯನ್ನು ಬಗೆದರೆಂದು ಹೇಳಿದರು. ನಾವು ಭಂಗಿಗಳ ಕೆಲಸ ಕೈಕೊಂಡಿದ್ದಿಲ್ಲವಾದರೆ ಮುನಸಿಪಾಲಿಟಿಯವರು ತಮ್ಮ ಬೇಡಿಗೆಗಳಿಗೆ ಒಪ್ಪಲೇಬೇಕಾಗುತ್ತಿದ್ದಿತೆಂಬುದು ಇದರ ಅರ್ಥ. ನಮ್ಮ ಮಧ್ಯಸ್ಥಿಕೆಯಿಂದ ಅವರ ಹೊಟ್ಟೆಯ ಮೇಲೆ ಹೊಡೆದಂತಾಯಿತು. ಅದುದರಿಂದ ಅದೊಂದು ಬಗೆಯ ಹಿಂಸಾಚಾರವೆಂದು ಅವರ ಹೇಳಿಕೆ. ನಿಮ್ಮ ಅಭಿಪ್ರಾಯವೇನು? ನಾನು ಮತ್ತು ಗೆಳೆಯರು ಹಿಂಸೆಯ ಅಪರಾಧ ಮಾಡಿದವೆಂದು ನಿಮ್ಮ ಅಭಿಪ್ರಾಯವೋ? ಅಥವಾ ನನ್ನ ಕೃತಿ ಕೇವಲ ತಪ್ಪಾಗಿದ್ದಿತೊ? ಭಂಗಿಗಳ ಬಗ್ಗೆ ನನಗೆ ಯಾವದೇ ಬಗೆಯ ದ್ವೇಷಭಾವನೆಯಿಲ್ಲೆಂದು ನಾನು ಹೇಳಬಯಸುತ್ತೇನೆ. ತದ್ವಿರುದ್ಧವಾಗಿ ನನ್ನ ಅಲ್ಪಸೇವೆಯನ್ನು ನಾನವರಿಗೆ ಸೇವೆ ಸಲ್ಲಿಸಿದ್ದೇನೆ. ೧೯೪೨ ರಲ್ಲಿ ನಾನು ಮುನಸಿಪಾಲಿಟಿಯ ಅಧ್ಯಕ್ಷನಾಗಿದ್ದಾಗ ಹರಿಜನೇತರ ಹುಡುಗರ ಜತೆಯಲ್ಲಿ ಹರಿಜನ ಹುಡುಗರಿಗೆ ಪ್ರವೇಶ ಕೊಟ್ಟು ನನ್ನ ಮೇಲೆಯೇ ಗಂಡಾಂತರ ತಂದುಕೊಂಡದ್ದುಂಟು”

ಶ್ರೀ ಘನಶ್ಯಾಮದಾಸಜಿಯವರು ಎತ್ತಿದ ಪ್ರಶ್ನೆ ಮಹತ್ವದ್ದಾಗಿದೆ. ಭಂಗಿಗಳ ಸಂಪು ನಿತ್ಯದ ಕ್ರಮವಾಗಿ ಬಿಟ್ಟಿದೆ. ಅವು ನಮ್ಮ ನಾಗರಿಕರ ಸದಸದ್ವಿವೇಕ ಬುದ್ಧಿಗೆ ಒಂದು ಬಗೆಯ ಆಹ್ವಾನ ನಮ್ಮ ಸ್ವಾತಂತ್ರ್ಯದ ಕೂಗಿನ ನಿಷ್ಠೆಯನ್ನು ಪರೀಕ್ಷಿಸತಕ್ಕ ಒರೆಗಲ್ಲು. ಅಹಮದಾಬಾದದಲ್ಲಿ ಇತ್ತೀಚೆ ಭಂಗಿಗಳು ಸಂಪು ಸಾರಿದಾಗ ಅಲ್ಲಿನ ನಾಗರಿಕರೂ ಇದೇ ರೀತಿ ಕಾರ್ಯ ಕೈಕೊಂಡರೆಂಬದಾಗಿ ಶ್ರೀ ಖಂಡುಭಾಯಿ ದೇಸಾಯರು ಬರೆದು ತಿಳಿಸಿದ್ದಾರೆ. ಭಂಗಿಗಳು ನಮ್ಮ ಸಾಮಾಜಿಕ ಮತ್ತು ಮುನಸಿಪಾಲಿಟಿಯ ಜೀವನದಲ್ಲಿ ಮಹತ್ವದ ಸ್ಥಾನವನ್ನು ಪಡೆದಿದ್ದಾರೆ. ಅವರ ಜೀವನ ಪರಿಸ್ಥಿತಿಯನ್ನು ಸುಧಾರಿಸುವದಕ್ಕೆ ಮತ್ತು ಅವರ ಕೆಲಸದ ಸಾಧನ ಸೌಕರ್ಯಗಳನ್ನು ಸುಧಾರಿಸುವದಕ್ಕೆ ನಾವು ಪ್ರಥಮ ಸ್ಥಾನವನ್ನು ಕೊಡಬೇಕು. ಅವರು ತಮ್ಮ ಕಷ್ಟಗಳ ನಿವಾರಣೆಗಾಗಿ ಸಂಪಿನಂಥ ಉಪಾಯ ಕೈಕೊಳ್ಳದೆ ನಾಗರಿಕರು ಮತ್ತು ಮುನಸಿಪಾಲಿಟಿಗೆ ಕರ ಕೊಡುವವರು ಅವರ ಸಲುವಾಗಿ ಸತ್ಯಾಗ್ರಹ ಹೂಡಬೇಕು.

ಭಂಗಿಗಳ ಬೇಡಿಕೆಗಳೆಲ್ಲ ಅವಶ್ಯವಾಗಿ ನ್ಯಾಯ್ಯವಿರುವವೆಂದಲ್ಲ. ಅದುದರಿಂದ ಕೂಲಿ ಮೊದಲಾದ ವಿಷಯಗಳ ಬಗ್ಗೆ ಇದ್ದ ವ್ಯಾಜ್ಯವನ್ನು ನಿಷ್ಪಕ್ಷಪಾತ ಪಂಚಾಯತಿಗೆ ಒಪ್ಪಿಸುವದಕ್ಕೆ ಸಮ್ಮತಿಸದಿರುವುದು ತಪ್ಪು. ಮೇಲೆ ಉಲ್ಲೇಖಿಸಿದ ಎರಡೂ ಸಂದರ್ಭಗಳಲ್ಲಿ ಸಂಪುಗಾರರು ಶರಣು ಬರುವಂತೆ ಒತ್ತಾಯ ಪಡಿಸಬೇಕೆಂಬ ಉದ್ದೇಶದಿಂದ ಜನರು ಆ ಕೆಲಸ ಸಾಗಿಸಿದ್ದರೆ ಸಂಪುಗಾರರ ದೃಷ್ಟಿಯಿಂದ ಅದು ನಿಂದ್ಯವಾದುದು. ಆದರೆ ಸಂಪುಗಾರರ ಬೇಡಿಕೆಗಳು ಅಸಮಂಜಸ ಮತ್ತು ಅನ್ಯಾಯದ್ದಾಗಿದ್ದರೆ ಅವರ ಆದೇಶವನ್ನು ಪ್ರತೀಕರಿಸುವ ಹಕ್ಕು ನಾಗರಿಕರಿಗೆ ಇದ್ದಿತು.

ಈಗ ಸಂಪುಗಳು ಕೊನೆಗಂಡ ಕೂಡಲೆ ನಗರ ಸ್ವಚ್ಛತೆಯ ಸಮಸ್ಯೆಯಲ್ಲಿ ನಾಗರಿಕರು ತೆಗೆದುಕೊಂಡ ಉತ್ಸಾಹ ಕೊನೆಗೊಳ್ಳಲಾರದು. ಅಂಥ ಸಂಪುಗಳ ಕಾರಣವೆ ಸಮೂಲ ನಾಶವಾಗುವಂತೆ ನೋಡಿಕೊಳ್ಳುವುದು ಅವರ ಕರ್ತವ್ಯ. ಅನೇಕ ನಗರಗಳಲ್ಲಿ ಭಂಗಿಗಳ ವಸತಿಗಳಲ್ಲಿಯ ಅತ್ಯಂತ ಹೇಸಿಕೆಯ ಜೀವನ ಪರಿಸ್ಥಿತಿ ಕೂಡಲೆ ಸುಧಾರಿಸಲಿಕ್ಕೆ ಬೇಕು. ಸ್ವಚ್ಛತೆಯ ಸೇವೆಯನ್ನು ಮಾಡುವ ಅತ್ಯುತ್ತಮ ಪದ್ಧತಿಯನ್ನು ಭಂಗಿಗಳಿಗೆ ಕಲಿಸಲಿಕ್ಕೆ ಬೇಕು. ಅವರು ಮತ್ತು ಅವರ ಮಕ್ಕಳು ಮಾದರಿಯ ನಾಗರಿಕರಾಗುವಂತೆ ಶಿಕ್ಷಣ ಸೌಕರ್ಯ ಮತ್ತು ವೈದ್ಯಕೀಯ ಪರಿಹಾರ ಅವರಿಗೆ ಸಿಕ್ಕಲಿಕ್ಕೆಬೇಕು. ಕೂಲಿ ಸಾಕಷ್ಟಿಲ್ಲದಿದ್ದರೆ ಅದನ್ನು ಹೆಚ್ಚಿಸಲಿಕ್ಕೆ ಬೇಕು. ಎಲ್ಲಕ್ಕೂ ಮಹತ್ವದ್ದೆಂದರೆ ಸ್ವಚ್ಛತೆಯ ಕೆಲಸವೆಂದರೇನೆಂಬುದರ ಅನುಭವವಿದ್ದ ಸುಧಾರಕರು ಹೊಲಸು ಹೇಸಿಕೆಗಳನ್ನು ತೆಗೆಯುವದಕ್ಕಾಗಿ ಯಾವ ಉಪಾಯಗಳನ್ನು ಕೈಕೊಳ್ಳಬೇಕೆಂಬುದನ್ನು ನಿರ್ಣಯಿಸಲು ಹೆಚ್ಚು ಸಮರ್ಥರಿರುವರು. ಯಾವ ಪದ್ಧತಿಯನ್ನವಲಂಬಿಸಿದರೆ ಭಂಗಿಗಳ ವೃತ್ತಿಯ ಅಸ್ವಚ್ಛ ಹೋರೆಯೆಂದು ಪರಿಗಣಿಸಲ್ಪಡಲಾರದೆಂಬುದನ್ನು ಈ ಸುಧಾರಕರು ನಿರ್ಣಯಿಸಬಲ್ಲರು. ಸಕಾಲದಲ್ಲಿ ಮತ್ತು ಹೆಚ್ಚು ಚಳವಳಿಯಾಗಗೊಡದೆ ಈ ಮಹತ್ವದ ಸುಧಾರಣೆಯತ್ತ ಗಮನ ನೀಡದಿದ್ದರೆ ಈಗ ಮಾಡಿದ ಅತ್ಯುತ್ತಮ ಕೆಲಸವು ನಿರರ್ಥಕ ಪರಿಶ್ರಮವೆಂದು ತಿಳಿಯಲ್ಪಡುವುದು.

ಹೊಸದಿಲ್ಲಿ ಪ್ಯಾರೇಲಾಲ
೨೧-೬-೪೬

## ಅಕ್ರಮ ನೋಟ

ಪ್ರಶ್ನೆ— ಏನು ಕಾಣೆನೇ ನಮ್ಮ ನಗಲಿರುವ
ನಚ್ಚಿನಾತ್ಮಗಳನು
ಎಲ್ಲಿ ತಾವು ಎಂತಿರುವ ರೀತಿ-
ಯನ್ನೊರೆವ ಗಳಿಗೆಯನ್ನು ?

ಈ ಬಗ್ಗೆ ನಿಮ್ಮ ಅಭಿಪ್ರಾಯವೇನು ?

ಉತ್ತರ— ಕರಳು ಬೆಂದವರನೇಕರ ಕೊರಗನ್ನು ಕವಿಯು ಇಲ್ಲಿ ಹೇಳಿದ್ದಾನೆ. ಅದಾಗ್ಯೂ ನಿಜವಾಗಿಯೂ ವಿರಕ್ತ ಮನಸ್ಸು ಈ ಲೋಕದಾಚೆಗಿರುವದನ್ನು ತಿಳಿಯಲು ಉತ್ಸುಕವಾಗಿರುವದಿಲ್ಲ. ಅದ್ದರಿಂದ ಕಾರ್ಡಿನಲ ನ್ಯೂಮನನ ಈ ಕೆಳಗಿನ ಎರಡು ಸಾಲುಗಳು ವಾಸ್ತವಿಕತೆಯನ್ನು ಚಿತ್ರಿಸುತ್ತವೆ.

ದೂರ ನೋಟವನೆಂತು ನೋಡಹೇಳೆನು ?
ಮುಂದಿಟ್ಟ ಒಂದಡಿಯೆ ಸಾಕು ಎಂದೆನು

ಹೊಸದಿಲ್ಲಿ
೧೫-೬-೪೬

## ಬರಗಾಲ ಟಿಪ್ಪಣಿಗಳು

### ಪಡ ಹಾಗು ಸಾಗಾಗಬಹುದಾದ ಭೂಮಿಗಳು

ಶ್ರೀ ವಿ ಎನ್. ಖಾನೋಳಕರರು ಮುಂಬಯಿಯಿಂದ ಬರೆಯುತ್ತಾರೆ:—

“ಹಿಂದುಸ್ತಾನ ಸರಕಾರದವರು ೧೯೪೧-೪೨ ರ ಬ್ರಿಟಿಶ್ ಹಿಂದುಸ್ತಾನದ ಒಕ್ಕಲತನದ ಅಂಕಿ ಸಂಖ್ಯೆಗಳನ್ನು ಪ್ರಸಿದ್ಧಿಸಿರುವರು (೧೯೪೫) ಅವುಗಳನ್ನು ಪರಿಶೀಲಿಸಿದರೆ ಇದೀಗ ತೀವ್ರವಾಗಿರುವ ಆಹಾರ ಸಮಸ್ಯೆ ಬಿಡಿಸಲು ಬಹಳ ಪ್ರಯತ್ನಿಸುತಿರುವ ಮಂತ್ರಿಗಳಿಗೆ ಬೇಕಾದಷ್ಟು ವಿಷಯ ಸಿಕ್ಕಬಹುದು.

“ಅಧಿಕಧಾನ್ಯ ಬೆಳೆಯಿರಿ” ಚಳವಳಿಯಿಂದ ಪರಿಸ್ಥಿತಿಯಲ್ಲಿ ಅಷ್ಟೇನು ಹೆಚ್ಚು ಬದಲಾವಣೆಯಾಗಿರಲಿಕ್ಕಿಲ್ಲ ಮತ್ತು ಕೆಳಗೆ ಕೊಟ್ಟ ಅಂಕಿಗಳು ದೇಶದಲ್ಲಿಯ ಸದ್ಯದ ಪರಿಸ್ಥಿತಿಯನ್ನು ಬಹಳ ಮಟ್ಟಿಗೆ ಚಿತ್ರಿಸುವವೆಂದು ಗ್ರಹಿಸಬಹುದಾಗಿದೆ.

“ವರದಿಯ ವರ್ಷದಲ್ಲಿ ಒಟ್ಟಿಗೆ ಪಡಬಿದ್ದಿದ್ದ ಭೂಕ್ಷೇತ್ರವು ೪೭೧೫೦೦೦೦ ಎಕರೆ ಇರುವದು ಮತ್ತು ಬಿತ್ತನೆಯಾದ ಕ್ಷೇತ್ರವು ೨೧೩೨೯೦೦೦೦ ಎಕರೆ ಇರುವದು. ಬ್ರಿಟಿಶ್ ಹಿಂದುಸ್ತಾನದಲ್ಲಿ ಪಡ ಭೂಮಿ ಮತ್ತು ಬಿತ್ತನೆಯಾದ ಭೂಮಿಯ ಕ್ಷೇತ್ರದ ಪ್ರಮಾಣವು ೨೨% ಇದೆ. ಆಯಾ ಪ್ರಾಂತಗಳ ಪ್ರಮಾಣ ಕೆಳಗಿನಂತಿದೆ.

| ಪ್ರಾಂತ | |
|---|---|
| ಅಜಮೀರ–ಮೇವಾಡ | ೬೫% |
| ಆಸಾಮ | ೩೦% |
| ಬಂಗಾಲ | ೧೮% |
| ಬಿಹಾರ | ೩೮% |
| ಮುಂಬಯಿ | ೧೭% |
| ಮಧ್ಯಪ್ರಾಂತ ವರ್ಹಾಡ | ೧೪% |
| ಕೊಡಗು | ೧೦೦% |
| ದಿಲ್ಲಿ | ೯% |
| ಮದ್ರಾಸ | ೩೧% |
| ಸರಹದ್ದು | ೧೯% |
| ಓಡಿಸಾ | ೩೦% |
| ಪಂಜಾಬ | ೧೧% |
| ಸಿಂಧ | ೧೧೧% |
| ಸಂಯುಕ್ತ ಪ್ರಾಂತ | ೮% |

“ಸಾಕಷ್ಟು ಗೊಬ್ಬರ ಮತ್ತು ನೀರು ಕೊಟ್ಟದ್ದಾದರೆ ಭೂಮಿಗಳನ್ನು ಪಡ ಇಡುವ ಅವಶ್ಯಕತೆಯಿಲ್ಲೆಂದು ತಜ್ಞರು ಅಭಿಪ್ರಾಯ ಪಡುತಿರುವರು. ಸಂಯುಕ್ತ ಪ್ರಾಂತದ ಅಂಕಿಗಳು ಇದನ್ನು ಸಿದ್ಧಪಡಿಸುತ್ತವೆ.

“ಸಾಗಾಗತಕ್ಕ ಕ್ಷೇತ್ರದ ಅಂಕಣದಲ್ಲಿ ಕೆಳಗಿನ ಅಂಕಿಗಳು ಇರುತ್ತವೆ.

| | |
|---|---|
| ಬಂಗಾಲ | ೮೬೨೭೮೮ ಎಕರೆ |
| ಮುಂಬಯಿ | ೨೦೭೩೦೧ ,, |
| ಮಧ್ಯಪ್ರಾಂತ-ವರ್ಹಾಡ | ೫೧೯೪೭೨೮ ,, |
| ಪಂಜಾಬ | ೪೨೩೨೨೮೬ ,, |
| ಅಂತು | ೧೦೪೯೭೧೦೩ ಎಕರೆ |

ಸರ್ ವಿಜಯರಾಘವಾಚಾರ್ಯರು ತಮ್ಮ “ಕಾಯಿದೆ ಮತ್ತು ಅದರ ಸಮಸ್ಯೆಗಳು” ಎಂಬ ಪುಸ್ತಕದಲ್ಲಿ ಹೀಗೆ ಬರೆಯುತ್ತಾರೆ.

‘ಉಳಿದ ೮೭೦ ಲಕ್ಷ ಎಕರೆ ಭೂಮಿಯು ಸರಕಾರದವರ ವರದಿಯಲ್ಲಿ ‘ಸಾಗಾಗದ ಕ್ಷೇತ್ರವೆಂದು ಪರಿಗಣಿಸಲಾಗಿದೆ. ಆಹಾರ ಪೂರೈಕೆಯ ಚರ್ಚೆಯ ಕಾಲಕ್ಕೆ ಮತ್ತು ಒಕ್ಕಲತನದ ಅಭಿವೃದ್ಧಿಗಾಗಿ ಸಿಕ್ಕಬಹುದಾದ ಭೂಮಿಯ ಬಗ್ಗೆ ಚರ್ಚಿಸುವಾಗ ಈ ಕ್ಷೇತ್ರವನ್ನು ಉಲ್ಲೇಖಿಸುವದುಂಟು. ಯೋಗ್ಯ ಬಂಡವಲಿನಲ್ಲಿ ಇದರಲ್ಲಿ ಎಷ್ಟು ಕ್ಷೇತ್ರವನ್ನು ಸಾಗು ಮಾಡಬಹುದೆಂಬದರ ಬಗ್ಗೆ ಕ್ರಮಬದ್ಧ ಪರಿಶೋಧನೆ ಆಗಿರುವದಿಲ್ಲ. ಪ್ರಾಂತಿಕ ಸರಕಾರಗಳು ಮಾಡಿದ ಲೆಕ್ಕವನ್ನು ನೋಡಿದರೆ ಈ ಕ್ಷೇತ್ರದಲ್ಲಿ ೧ ಕೋಟಿ ಎಕರೆ ಭೂಮಿಯನ್ನು ನಿಶ್ಚಿತವಾಗಿ ಸಾಗು ಮಾಡಬಹುದಾಗಿದೆಂಬುದು ಗೊತ್ತಾಗುವದು.

(ಪುಟ ೪)

“ಮೇಲಿನದಲ್ಲದೆ ವರದಿಯಲ್ಲಿಯ ಈ ಅಂಶಗಳು ಮನನೀಯವಾಗಿವೆ.

೧) ಕಲ್ಲಾರು ಮತ್ತು ಉಳಿದ ನಾರಿನ ಕ್ಷೇತ್ರ ೨೯೫೨೦೦೦ ಎಕರೆ.
೨) ಚಹಾ ಮತ್ತು ಕಾಫಿ ೮೮೧೦೦೦ ,,
೩) ತಂಬಾಕು ೧೧೯೬೦೦೦ ,,
೪) ಅಫು ೧೮೦೦೦ ,,
೫) ಉಳಿದ ಮಾದಕ ಔಷಧಗಳು ೧೯೪೦೦೦

ಅಂತು ೫೨೦೧೦೦೦ ಎಕರೆ

“ಕಲ್ಲಾರಿನಲ್ಲಿ ಬಹಳ ಭಾಗವು ಪರದೇಶಕ್ಕೆ ಹೋಗುತ್ತದೆ. ಚಹಾದ ತೋಟಗಳಲ್ಲಿ ಸಾವಿರಾರು ಎಕರೆ ಭೂಕ್ಷೇತ್ರವನ್ನು ಮುಂದೆ ಸಾಗ್ಯ ಮಾಡುವಾ ಎಂದು ಒಡೆಯರು ಕಾಯ್ದಿಟ್ಟಿರುವರು. ಆಹಾರ ಕೊರತೆ ಬಹಳ ಹೆಚ್ಚಿದ್ದರಿಂದ ಮೇಲೆ ಉಲ್ಲೇಖಿಸಿದಂತೆ ೩,೪ ಮತ್ತು ೫ ರಲ್ಲಿಯ ಭೂಮಿಯನ್ನು ಆಹಾರ ಕ್ಷೇತ್ರವನ್ನಾಗಿ ಮಾರ್ಪಡಿಸಬಹುದಾಗಿದೆ. ಲೋಕಪ್ರಿಯ ಮಂತ್ರಿಗಳು ಕೂಡಲೆ ಕೈಕೊಳ್ಳಬಹುದಾದ ವಿಷಯವಿದು. ಕೇಂದ್ರದಲ್ಲಿ ರಾಷ್ಟ್ರೀಯ ಸರಕಾರದ ಸ್ಥಾಪನೆಯಾಗುವವರೆಗೆ ಅವರು ದಾರಿ ಕಾಯಬಾರದು.

ಹೊಸದಿಲ್ಲಿ ಪ್ಯಾರೇಲಾಲ
೧೫-೬-೪೬

## ಸತ್ಯಪ್ರಿಯತೆ

ಹಿಂದುಸ್ತಾನದಲ್ಲಿಯ ಸತ್ಯಪ್ರಿಯತೆಯ ಬಗೆಗೆ ಶ್ರೀ ವಿ. ಜಿ. ದೇಸಾಯರು ಹರಿಜನ ಬಂಧುವಿನಲ್ಲಿ ಗುಜರಾಥಿಯಲ್ಲಿ ಒಂದು ಲೇಖವನ್ನು ಬರೆದಿದ್ದಾರೆ ಆ ಲೇಖದಲ್ಲಿಯ ಕೊನೆಯ ಭಾಗವನ್ನು ಕೆಳಗೆ ಕೊಡಲಾಗಿದೆ.

ಪ್ಯಾರೇಲಾಲ

“ಮೆಂಡರವಾಲಾ ಪುರುಷೋತ್ತಮ ಮವಾನಿಯವರು ೪೪೦೦ ರೂಪಾಯಿಗಳಿಗಾಗಿ ದರಬಾರ ಶ್ರೀ ವಾಲಾಭಾಯಿಯವರ ಮೇಲೆ ಖಟ್ಲೆ ಹೂಡಿದ್ದರು. ಪುರುಷೋತ್ತಮ ಇವರ ತಂದೆಯವರಾದ ದಾಮೋದರ ಮವಾನಿಯವರ ಪಂಚಾಯತಿಗೆ ಒಪ್ಪುವುದಾಗಿ ವಾಲಾಭಾಯಿಯವರು ಹೇಳಿದರು. ದಾಮೋದರಭಾಯಿಯವರು ಕೋರ್ಟಿಗೆ ಹೋಗಿ ತಮಗೆ ಗೊತ್ತಿದ್ದ ಮಟ್ಟಿಗೆ ಪುರುಷೋತ್ತಮನು ದರಬಾರರಿಗೆ ೨೦೦೦ ರೂಪಾಯಿಗಳನ್ನು ಮಾತ್ರ ಕೊಟ್ಟಿದ್ದನೆಂದು ಹೇಳಿದರು. ಅದುದರಿಂದ ವಾಲಾಭಾಯಿಯವರು ಪುರುಷೋತ್ತಮನಿಗೆ ಪೂರ್ಣ ೪೪೦೦ ರೂಪಾಯಿಗಳನ್ನು ಕೊಟ್ಟರು.

“ಜೇತಪುರದಲ್ಲಿ ಸಾರ್ವಜನಿಕ ಚೌಕಿನಲ್ಲಿ ಒಂದು ದೋಣಿಯ ಹತ್ತರದ ಸ್ಥಳದ ಬಗ್ಗೆ ಹಿಂದೂ-ಮುಸಲ್ಮಾನರಲ್ಲಿ ಕಲಹವಿದ್ದಿತು. ೯೫ ವರುಷದ ದಾವುದ ಬೇಗ ಮತ್ತು ಅಬಾಅಬು ಇವರ ಪಂಚಾಯತಿಯನ್ನು ತಾವು ಒಪ್ಪುವದಾಗಿ ಹಿಂದುಗಳು ಹೇಳಿದರು. ಆ ಭೂಮಿ ಹಿಂದುಗಳ ಒಡೆತನದ್ದೆಂದು ಆ ಇಬ್ಬರು ಸದ್ಗೃಹಸ್ಥರು ಹೇಳಿದರು. ಈ ರೀತಿ ಹಿಂದುಗಳು ಗೆದ್ದ ಭೂಮಿಯಲ್ಲಿ ಸಾಧುವೊಬ್ಬನ ಗುಡಿಸಲು ಇಂದಿಗೂ ನಿಂತಿದೆ”

## ಟೀಕೆ ಟಿಪ್ಪಣಿಗಳು

[೭ ನೇ ಪುಟದಿಂದ ಮುಂದರಿದುದು]

ವರು. ಅವರಿಗಾಗಿ ಸಹಾಯಕ್ಕಾಗಿ ನಾನು ಮಾಡುತಿರುವ ಪ್ರಯತ್ನವನ್ನು ಅವರು ಸ್ನೇಹಪೂರ್ವಕವಾಗಿ ಪ್ರಶಂಸಿಸುತಿರುವರು. ನೂಲಿನ ವಿನಿಮಯವನ್ನು ಲೋಕಪ್ರಿಯ ಮಾಡುವುದಕ್ಕಾಗಿ ಕಳೆದ ವರ್ಷ ನಾವು ನೂಲಿನ ಲಡಿಯ ಅಂಗಡಿಯನ್ನು ತೆರೆದಿದ್ದೇವೆ. ಅದರ ಬಗ್ಗೆ ಸ್ವಲ್ಪ ಹೇಳಬಯಸುತ್ತೇನೆ. ಸಾಯಂಪ್ರಾರ್ಥನೆಯ ನಂತರ ಹಳ್ಳಿಗರಿಗಾಗಿ ನಾವು ದಿನಾಲು ಒಂದು ಬಗೆಯ ಆಟವೆಂದು ಲಡಿಯ ಅಂಗಡಿಯನ್ನು ನಡೆಸುತಿದ್ದುದರ ಪರಿಣಾಮವಾಗಿಯೇ ಈ ಅಂಗಡಿ ಹೊರಟಿದಾಗಿದೆ. ಕಳೆದ ವರ್ಷದ ಮೇ ತಿಂಗಳಿಂದ ಸಾಬೂಣ ಎಣ್ಣೆ, ಉಪ್ಪು, ಬೆಲ್ಲ, ಮೆಣಸಿನಕಾಯಿ, ನೆಲಗಡಲೆ ಮೊದಲಾದ ಪದಾರ್ಥಗಳನ್ನು ನೂಲು ತಕ್ಕೊಂಡೇ ಮಾರುತಿರುವೆವು. ಮೇ ತಿಂಗಳಲ್ಲಿ ನಮ್ಮ ಹತ್ತರ ೪೩ ಲಡಿಗಳಿದ್ದರೆ ಸಪ್ಟಂಬರದಲ್ಲಿ ಆ ಸಂಖ್ಯೆ ೨೩೩ ಕ್ಕೆ ಹೋಯಿತು. ಕಳೆದ ತಿಂಗಳು ಜನರೆಲ್ಲ ಸುಗ್ಗಿಯಲ್ಲಿ ತೊಡಗಿದ್ದರಿಂದ ಇದು ಬಹಳ ಬಿದ್ದಿತು.

“ನನ್ನ ಸಾಲೆಗೆ ಬರುತಿರುವ ೧೦ ವರ್ಷ ವಯಸ್ಸಿನ ಮಕ್ಕಳು ಈ ಅಂಗಡಿಯನ್ನು ನಡೆಸುತಿರುವರು. ಹೊಲಸು ರೊಜ್ಜುಗಳಲ್ಲಿ ಕಾಲ ಕಳೆಯುತಿದ್ದ ಇಂಥ ಇಬ್ಬರು ಹುಡುಗೆಯರು ಈ ಸಣ್ಣ ನಾಟಕದಲ್ಲಿ ಮುಖ್ಯ ಪಾತ್ರ ವಹಿಸುತಿರುವರು.

ಹೊಸದಿಲ್ಲಿ ಮೋ. ಕ. ಗಾಂಧಿ
೨೩-೬-೪೬ (ಹರಿಜನ ಬಂಧುವಿನಿಂದ)



## ಮುಂಬಯಿ

ಸೊಲ್ಲಾಪುರ ಸ್ಪಿನ್ನಿಂಗ ಅ್ಯಂಡ ವೀವ್ಹಿಂಗ ಕಂಪನಿಯ ಒಡೆತನದ ಸೊಲ್ಲಾಪುರ ವಿದ್ಯುದ್ಯಂತ್ರಾಲಯದ ಕೆಲಸಗಾರರು ತಮ್ಮ ಬೇಡಿಕೆಗಳನ್ನು ೫ ದಿನಗಳಲ್ಲಿ ಮನ್ನಿಸದಿದ್ದರೆ ಸಂಪು ಹೂಡುವದಾಗಿ ನೋಟೀಸು ಕೊಟ್ಟಿದ್ದಾರೆ. ಕೂಲಿಯನ್ನು ಹೆಚ್ಚಿಸಬೇಕೆಂಬುದು ಅವರ ಬೇಡಿಕೆಗಳಲ್ಲಿ ಒಂದಾಗಿದೆ.

ಇದೇ ೧೦ ನೇ ತಾರೀಕು ಮಧ್ಯರಾತ್ರಿಯಿಂದ ಎರಡು ಲಕ್ಷಕ್ಕಿಂತ ಹೆಚ್ಚು ಪೋಸ್ಟಮನ್‌ರು, ಪ್ಯಾಕರರು, ರನ್ನರರು ಮತ್ತು ಇತರ ಕೆಳವರ್ಗದ ನೌಕರರು ಸಂಪಿನ ಮೇಲೆ ಹೋಗುವ ನೋಟೀಸ ಕೊಟ್ಟಿದ್ದಾರೆ.

೧೯೪೨ ನೇ ಚಳವಳಿಯಲ್ಲಿ ಜಪ್ತ ಮಾಡಿದ ಪುಣೆಯ ಎಸ್. ಪಿ. ಲಿಮಯ ಹಾಗು ಮಾಧವ ಲಿಮಯೆ ಇವರ ಮನೆ ಹಾಗು ಸ್ಥಾವರ ಆಸ್ತಿಗಳನ್ನು ತಿರುಗಿ ಕೊಡಲು ಮುಂಬಯಿ ಸರಕಾರದವರು ವಿಧಿಸಿದ್ದಾರೆ.

ಕಳೆದ ೧೮ ದಿನಗಳಿಂದ ಉಪವಾಸ ಕೈಕೊಂಡ ಕೂಲಿಕಾರ ಧುರೀಣರಾದ ಆರ್. ಎಸ್. ನಿಂಬಕರರ ತೂಕವು ೧೬ ಪೌಂಡು ಕಡಿಮೆಯಾಗಿ ಅವರು ಗೆಳೆಯರ ಒತ್ತಾಯದಿಂದ ೨೬ ನೇ ತಾರೀಕು ಪಾರಣೆ ಮಾಡಿದರು.

ಮುಂಬಯಿ ಸರಕಾರದ ವಿದ್ಯಾಖಾತೆಯ ಡಾಯರೆಕ್ಟರರಾದ ಶ್ರೀ ಆರ್. ಪಿ. ಪಟವರ್ಧನರು ಎರಡು ತಿಂಗಳು ರಜೆ ತೆಗೆದುಕೊಂಡಿದ್ದರಿಂದ ಶ್ರೀ ಕೆ. ಆರ್. ಗುಂಜೀಕರರು ಡಾಯರೆಕ್ಟರರಾಗಿ ನೇಮಿಸಲ್ಪಟ್ಟಿರುವರು. ಡಾ. ಡಿ. ಸಿ. ಪಾವಟೆಯವರು ಡೆಪ್ಯೂಟಿ ಡಾಯರೆಕ್ಟರರಾಗಿ ನೇಮಿಸಲ್ಪಟ್ಟಿರುವರು.

ತಮ್ಮ ಹೆಸರು ಖಾದೀ ಭಾಂಡಾರದಲ್ಲಿ ರಜಿಸ್ಟರ ಮಾಡಿಸಿದವರಿಗಷ್ಟೆ ಜುಲೈ ೧ ರಿಂದ ಖಾದಿಯನ್ನು ಕೊಡಲಾಗುವದೆಂದು ಮುಂಬಯಿ ಖಾದೀ ಭಾಂಡದವರು ಸಾರಿದ್ದಾರೆ. ಯಾರು ಸ್ವತಃ ನಿಯತವಾಗಿ ನೂಲುವರೋ ಇಲ್ಲವೆ ಅವರ ಮನೆಯ ಯಾರಾದರೂ ಅಥವಾ ಸೇವಕರಾದರೂ ನೂಲುವರೋ ಅಂಥವರ ಹೆಸರು ಮಾತ್ರ ರಜಿಸ್ಟರ ಮಾಡಿಕೊಳ್ಳಲಾಗುವದು. ಖಾದೀಧಾರಿಗಳು ದಯವಿಟ್ಟು ಮೇಲಿನ ಕರಾರಿಗನುಸಾರವಾಗಿ ತಮ್ಮ ಹೆಸರು ರಜಿಸ್ಟರ ಮಾಡಿಸಿಕೊಳ್ಳಬೇಕೆಂದು ಕಾರ್ಯದರ್ಶಿಗಳು ಬಿನ್ನವಿಸುತ್ತಾರೆ.

ಸಾತಾರಾ ಕೂಪರ ಇಂಜಿನಿಯರಿಂಗ ವರ್ಕ್ಸದ ಒಡೆಯರು ಮತ್ತು ಕೂಲಿಕಾರರಲ್ಲಿ ನಡೆದ ವ್ಯಾಜ್ಯವು ಬಗೆಹರಿಯದ್ದರಿಂದ ಸರಕಾರದವರು ಸಂರಕ್ಷಣ ಕಾಯದೆಯ ೮೧ ಅ ಕಲಮಿನನ್ವಯ ನ್ಯಾಯ ಮಂಡಲಕ್ಕೆ ಅದನ್ನೊಪ್ಪಿಸಲು ನಿರ್ಧರಿಸಿದ್ದಾರೆ. ಒಡೆಯರು ಕೂಡಲೆ ಕಾರಖಾನೆಯನ್ನು ಪ್ರಾರಂಭಿಸಬೇಕೆಂದೂ ಕೆಲಸಗಾರರು ಕೂಡಲೇ ಕೆಲಸಕ್ಕೆ ಬರಬೇಕೆಂದೂ ಸರಕಾರದವರು ಬಿನ್ನವಿಸುತ್ತಾರೆ.

೧೯೪೨ ರ ಚಳವಳಿಯಲ್ಲಿ ವಶಪಡಿಸಿಕೊಂಡು ಸೀಲ ಮಾಡಿದ ಇಲ್ಲವೆ ಜಪ್ತಮಾಡಿದ ಆಸ್ತಿಯನ್ನೆಲ್ಲ ಮುಂಬಯಿ ಸರಕಾರದವರು ತಿರುಗಿ ಕೊಡಲು ನಿರ್ಧರಿಸಿದ್ದು ಅವುಗಳ ಒಡೆಯರು ಆಯಾ ಜಪ್ತ ಮಾಡಿದ ಅಧಿಕಾರಿಗಳಿಗೆ ಅವನ್ನು ತಿರುಗಿ ಒಪ್ಪಿಸಲು ಕೇಳಿಕೊಳ್ಳಬೇಕೆಂದೂ ಸೂಚಿಸಿದ್ದಾರೆ.

ಪಶ್ಚಿಮ ಹಿಂದುಸ್ತಾನ, ಗುಜರಾತ ಮತ್ತು ರಜಪುತಾನದಲ್ಲಿಯ ಸಂಸ್ಥಾನಾಧಿಪತಿಗಳು ಜುಲೈ ಎರಡನೇ ವಾರದಲ್ಲಿ ದಿಲ್ಲಿಯಲ್ಲಿ ಕೂಡಿ ಸುಮಾರು ೨೦ ಸಂಸ್ಥಾನಗಳ ಒಂದು ಸ್ವಯಂಪೂರ್ಣ ಸಂಘ ಸ್ಥಾಪನ ಮಾಡುವ ವಿಚಾರ ಮಾಡುವರೆಂದು ತಿಳಿಯುತ್ತದೆ.

ಮುಂಬಯಿ ಶಾಸನಸಭೆಯ ಆಯವ್ಯಯ ಅಧಿವೇಶನ ಜುಲೈ ೧೫ ಕ್ಕೆ ಕೂಡುವುದೆಂದೂ ಆ ಸಭೆಯಲ್ಲಿಯೆ ಘಟನಾಸಮಿತಿಗೆ ಸದಸ್ಯರನ್ನಾರಿಸಲಾಗುವದೆಂದೂ ತಿಳಿಯುತ್ತದೆ. ಘಟನಾಸಮಿತಿ ಸದಸ್ಯರನ್ನಾರಿಸಲು ಪ್ರತ್ಯೇಕವಾಗಿ ಶಾಸನಸಭೆ ಕರೆಯುವ ಸಂಭವವಿಲ್ಲೆಂದು ತಿಳಿಯುತ್ತದೆ. ಮುಂಬಯಿ ಪ್ರಾಂತವು ಒಟ್ಟಿಗೆ ೨೧ ಸದಸ್ಯರನ್ನಾರಿಸುವದು.

# ಹಿಂದುಸ್ತಾನ

## ಮದ್ರಾಸ

ಮದ್ರಾಸ ನಗರ ಮತ್ತು ಉಪನಗರಗಳಲ್ಲಿ ಸರಕಾರದವರು ಸಕ್ಕರೆ ಸೀದಾ ಜಾರಿಯಲ್ಲಿ ತರಲಿರುವರು.

ಮದುರಾದಲ್ಲಿ ಪಂಡಿತ ಜವಾಹರಲಾಲರ ಬಂಧನಕ್ಕಾಗಿ ಸಾರಿದ ಹರತಾಳದ ನಿಮಿತ್ತದಿಂದ ದೊಂಬಿ ಸಂಭವಿಸಿ ಪೋಲೀಸರು ಗೋಳೀಬಾರು ಮಾಡಿ ಪರಿಸ್ಥಿತಿಯನ್ನು ಶಾಂತಪಡಿಸಿದರು. ಒಟ್ಟಿಗೆ ೭ ಜನರು ಮರಣಹೊಂದಿದ್ದು ೩೦ ಜನರಿಗೆ ಗಾಯಗಳಾದವು. ೨೦೦ ಜನ ಸೆರೆಹಿಡಿಯಲ್ಪಟ್ಟಿದ್ದಾರೆ. ಕೂಲಿಕಾರ ಮುಂತ್ರಿಗಳಾದ ಶ್ರೀ ಗಿರಿಯವರು ಅಲ್ಲಿಗೆ ಹೋಗಿ ಪರಿಸ್ಥಿತಿಯನ್ನು ಶಾಂತಗೊಳಿಸಿದರು.

ಮೂಲ ಶಿಕ್ಷಣ ಪದ್ಧತಿಯಲ್ಲಿ ಶಿಕ್ಷಕರನ್ನು ತರಬೇತಿ ಮಾಡಲು ಮದ್ರಾಸ ಸರಕಾರದವರು ತಮಿಳನಾಡು ಅಂಧ್ರ ಹಾಗು ಮಲಬಾರಗಳಲ್ಲಿ ಒಂದೊಂದು ತರಬೇತಿ ವರ್ಗ ತೆರೆಯಲು ಅಪ್ಪಣೆ ವಿಧಿಸಿದ್ದಾರೆ. ಈ ಪ್ರತಿಯೊಂದು ಶಾಲೆಯಲ್ಲಿ ವರ್ಷಕ್ಕೆ ೭೦ ಶಿಕ್ಷಕರಿಗೆ ಪ್ರತಿಯೊಬ್ಬರಿಗೆ ೧೮ ರೂ. ಮಾಸಿಕ ಶಿಷ್ಯವೃತ್ತಿ ಕೊಟ್ಟು ಶಿಕ್ಷಣ ಕೊಡಲಾಗುವದು.

ಮದ್ರಾಸ ಪ್ರಾಂತದಲ್ಲಿ ೮೧೩ ಹೊಸ ಬಾವಿಗಳನ್ನು ತೆಗೆದಿದ್ದು ೩೯೭ ಹಳೆಯ ಬಾವಿಗಳನ್ನು ದುರಸ್ತಿ ಮಾಡಲಾಗಿದೆ. ೨೭೭೯ ಹೊಸ ಬಾವಿಗಳು ಮತ್ತು ೧೦೭೧೦ ಹಳೆಯ ಬಾವಿಗಳನ್ನು ಅಗಿಯುವ ದುರಸ್ತಿ ಮಾಡುವ ಕೆಲಸ ಮುಗಿಯುತ್ತ ಬಂದಿದೆ. ೪೯೨೨ ಹೊಸ ಬಾವಿಗಳಿಗಾಗಿ ೧೨೬೦೧೩೪೪ ರೂಪಾಯಿಗಳನ್ನು ಸರಕಾರದವರು ಸಹಾಯಧನವೆಂದು ಕೊಟ್ಟಿದ್ದು ೧೬೮೧೮ ಹಳೆ ಬಾವಿಗಳಿಗಾಗಿ ೨೪೩೪೨೩ ರೂ. ಕೊಟ್ಟಿದ್ದಾರೆ.

ಮದ್ರಾಸ ಪ್ರಾಂತದಲ್ಲಿಯ ಜಿಲ್ಲಾ ಬೋರ್ಡ ಮತ್ತು ಮುನಸಿಪಾಲಿಟಿಗಳಿಗೆ ಹೆಚ್ಚಿನ ಅಧಿಕಾರ ಕೊಟ್ಟು ಸರಕಾರದವರು ಅವನ್ನು ಸ್ವಾಯತ್ತ ಮಾಡಲಿರುವರು.

ಮದ್ರಾಸ ಸರಕಾರದವರು ಗ್ರಾಮಾಂತರ ಆರೋಗ್ಯ ಸುಧಾರಣೆಗಾಗಿ ಪಂಚವಾರ್ಷಿಕ ಯೋಜನೆ ಕೈಕೊಂಡು ಹಳ್ಳಿಗಳಲ್ಲಿ ಆಯುರ್ವೇದ, ಯುನಾನಿ, ಹೋಮಿಯೋಪಥಿ ದವಾಖಾನೆ ತೆರೆಯಲಿರುವರು.

## ಪಂಜಾಬ

ಸುಭಾಸ ಸೇನಾ ಪರಿಹಾರ ಸಮಿತಿಯವರು ಸುಭಾಸ ಸೇನೆಯ ಸೈನಿಕರಿಗೆ ಉದ್ಯೋಗ ದೊರಕಿಸಿ ಕೊಟ್ಟು ಅವರಿಗೆ ಪರಿಹಾರ ಕೊಡಲು ಒಂದು ಯೋಜನೆಯನ್ನು ಸಿದ್ಧಪಡಿಸಿದ್ದಾರೆ. ಇದರಿಂದ ಪಂಜಾಬದಲ್ಲಿ ೨೮ ಪ್ರಾದೇಶಿಕ ಕಚೇರಿಗಳನ್ನು ಸ್ಥಾಪಿಸಿ ಅಲ್ಲಲ್ಲಿ ಸೈನಿಕರಿಗೂ ಅವರ ಕುಟುಂಬದವರಿಗೂ ಸಹಾಯ ನೀಡಲಾಗುವದು.

ಬ್ರಿಟಿಶರಿಂದ ಸ್ವಾತಂತ್ರ್ಯ ಹಾಗು ನ್ಯಾಯ ದೊರಕಿಸುವಲ್ಲಿ ಮೊದಲನೆ ಮಾರ್ಗವೆಂದು ಸೀಖರೆಲ್ಲ ಬ್ರಿಟಿಶ್ ಸರಕುಗಳನ್ನು ಸಂಪೂರ್ಣವಾಗಿ ಬಹಿಷ್ಕರಿಸಬೇಕೆಂದು ಪಾಂಥಿಕ ಮಂಡಳದ ಅಧ್ಯಕ್ಷರಾದ ಕರ್ನಲ್ ನಿರಂಜನ ಸಿಂಹರು ಸಲಹೆಯಿತ್ತಿದ್ದಾರೆ.

ಪಂಜಾಬದಲ್ಲಿ ಬೆಳೆಗಳಿಗೆ ಮಿಡಚಿಗಳ ಹಾವಳಿಯಾಗುವ ಅಂಜಿಕೆಯುಂಟಾದ್ದರಿಂದ ಅಧಿಕಾರಿಗಳು ಈಗಿನಿಂದಲೆ ದಕ್ಷತೆ ವಹಿಸುತಿರುವರು.

ನಡುಗಾಲ ಸರಕಾರದಲ್ಲಿ ಸೇರಲು ಒಪ್ಪದಿದ್ದ ಸರದಾರ ಬಲದೇವ ಸಿಂಗರು ಪಂಜಾಬ ಮಂತ್ರಿಸ್ಥಳಕ್ಕೂ ರಾಜೀನಾಮೆ ಕೊಡುವರೆಂದು ಹಬ್ಬಿದ ಸುದ್ದಿ ನಿರಾಧಾರವಾಗಿದೆಂದು ಅವರು ಹೇಳಿದರು.

ಯುದ್ಧಕಾಲದಲ್ಲಿ ಬ್ಯಾಂಡೇಜಗಳಿಗಾಗಿ ಕೊಟ್ಟ ಅರಿವೆಯನ್ನು ಮಾಯ ಮಾಡಿದ ಬಗ್ಗೆ ಸ್ಪೆಶಲ್ ಪೊಲಿಸ ಅಧೀಸರರು ಬಿಹಾರಿಲಾಲ ಪಶ್ರಿಶಾ ಮತ್ತು ಅವರ ತಮ್ಮ ಈಶ್ವರದಾಸ ಪಶ್ರಿಶಾ ಇವರ ಮೇಲೆ ೬ ವಾರಗಳ ಮೇಲೆ ಖಟ್ಲೆ ನಡೆದು ಇಬ್ಬರಿಗೂ ೨ ವರ್ಷಗಳ ಶಿಕ್ಷೆ ಮತ್ತು ೨೫ ಸಾವಿರ ರೂಪಾಯಿ ದಂಡ ವಿಧಿಸಲಾಯಿತು.

## ಹೊಸದಿಲ್ಲಿ

೧೯೪೫-೪೬ ರಲ್ಲಿ ಹಿಂದುಸ್ತಾನದಲ್ಲಿ ೩೪೫೩೮೦೦೦ ಎಕರೆ ಭೂಮಿಯಲ್ಲಿ ಗೋದಿ ಬಿತ್ತಲಾಯಿತೆಂದೂ ಕಳೆದ ವರ್ಷಕ್ಕಿಂತ ಇದು ನೂರಕ್ಕೆ ೩ ರಷ್ಟು ಹೆಚ್ಚಿದೆಂದೂ ತಿಳಿಯುತ್ತದೆ.

ದಕ್ಷಿಣ ವಜಿರಸ್ತಾನದ ರಾಜಕೀಯ ಏಜಂಟ ಮೇ. ಜೆ. ಓ. ಎಸ್. ಡೋನಾಲ್ಡ ಇವರನ್ನು ಎರಡು ದಿನಗಳ ಹಿಂದೆ ಮಹಸುದಿ ಗುಡ್ಡಗಾಡ ಜನರು ಎತ್ತಿಕೊಂಡು ಹೋಗಿರುವರೆಂದು ಪೇಶಾವರದಿಂದ ಸುದ್ದಿ ಬಂದಿದೆ. ಅವರನ್ನೆಲ್ಲಿಡಲಾಗಿದೆಂಬುದು ಗೊತ್ತಾಗಿದ್ದು ಅವರನ್ನು ಒಳ್ಳೆ ರೀತಿಯಿಂದ ನಡೆಸಿಕೊಳ್ಳಲಾಗುತ್ತಿದೆಂದು ತಿಳಿಯುತ್ತದೆ.

## ಸಿಂಧ

ಘಟನಾ ಸಮಿತಿಯ ಸಭೆ ಸುಮಾರು ಒಂದು ವರ್ಷದ ವರೆಗೆ ನಡೆಯಬಹುದೆಂದೂ ಈ ಸಮಿತಿಯ ಸದಸ್ಯರಿಗೆ ದಿನಾಲು ೭೫ ರೂಪಾಯಿ ಭತ್ತೆ ದೊರೆಯುವದೆಂದೂ ಸಿಂಧ ಮುಖ್ಯ ಮಂತ್ರಿ ಸರ್ ಗುಲಾಮ ಹುಸೇನ ಹಿದಾಯತುಲ್ಲಾರವರು ಹೇಳಿದರು. ಮಂತ್ರಿಗಳು ಈ ಸಮಿತಿಯಲ್ಲಿ ಸೇರಿದರೆ ಕೆಲಸಕ್ಕೆ ವ್ಯತ್ಯಯ ಬರುವದಾದ್ದರಿಂದ ಅವರು ಆ ಸಮಿತಿಯ ಸದಸ್ಯರಾಗಬಾರದೆಂದೂ ಅವರ ಅಭಿಪ್ರಾಯ.

ಕರಾಚಿಯಲ್ಲಿ ಸರ್ ರಾಧಾಕೃಷ್ಣನ್‌ರು ೨೬ ನೇ ತಾರೀಕು ಹಿಂದೀ ವ್ಯಾಪಾರಿ ಸಂಘದವರು ಸ್ಥಾಪಿಸಿದ ಮಹಾತ್ಮಾ ಗಾಂಧಿಯವರ ಕಂಚಿನ ಪ್ರತಿಮೆಯ ಅನಾವರಣೋತ್ಸವವನ್ನು ಜರಗಿಸಿದರು.

ಸಿಂಧ ಲೀಗ ಮಂತ್ರಿ ಮಂಡಳವು ತಳೆದಿರುವ ಜಾತೀಯ ಧೋರಣೆಯ ಅತಿರೇಕದ ಬಗ್ಗೆ ಸಿಂಧ ಶಾಸನ ಸಭೆಯ ಕಾಂಗ್ರೆಸ್ ಪಕ್ಷದ ಸಭೆ ತೀವ್ರ ನಿಷೇಧಿಸಿ ಅಲ್ಪ ಸಂಖ್ಯಾಕರಿಗೆ ಯೋಗ್ಯವಾದ ಹಕ್ಕುಬಾಧ್ಯತೆಗಳನ್ನು ಕೊಡಬೇಕೆಂದು ಕೇಳಿಕೊಳ್ಳಲಾಯಿತು.

## ಬಿಹಾರ

ಉತ್ತರ ಬಿಹಾರದ ಬೆಟ್ಟಿಯಾದ ಸಬ್ ಡಿವಿಜನಲ್ ಮ್ಯಾಜಿಸ್ಟ್ರೇಟ ಎ. ಎಚ್. ಕ್ವಾರ್ನಿಯವರು ೫೦ ಮೈಲು ಆನೆಯ ಮೇಲೆ ಹೋಗಿ ೫೦೦೦ ಮಣ ಭತ್ತವನ್ನು ತಪಾಸ ಮಾಡಿದ್ದಾರೆ. ಲೆವಿ ಕಾಯದೆ ಮುರಿದು ಇಷ್ಟು ಭತ್ತ ಉಳಿಸಿಕೊಳ್ಳಲಾಗಿತ್ತಂತೆ.

ಬಿಹಾರ ಮೇಲ್ಮನೆಯಲ್ಲಿ ಪ್ರಾಥಮಿಕ ಶಿಕ್ಷಣ ತಿದ್ದುಪಡಿ ಮಸೂದೆ ಸ್ವೀಕೃತವಾಯಿತು. ಲೀಗ ಮೆಂಬರರು ವರ್ಧಾ ಯೋಜನೆಗೆ ವಿರೋಧ ಪ್ರದರ್ಶಿಸಿ ಸಭೆಯಿಂದ ಎದ್ದು ಹೋದರು.

ಉತ್ತರ ಬಿಹಾರದ ಮೋತೀಹಾರ ಭಾಗದಲ್ಲಿ ಹೆಣಕ್ಕೆ ಕೂಡ ಹೊಚ್ಚಲು ಅರಿವೆ ಸಿಕ್ಕದ ಪರಿಸ್ಥಿತಿಯುಂಟಾಗಿದೆ.

## ಮತ್ತೆ ಮಾವಿನ ತಿಳಲಿನ ಬಗ್ಗೆ

೧೯೪೩ ನೇ ಇಸ್ವಿಯ ಡಿಸೆಂಬರ ತಿಂಗಳದ “ಇಂಡಿಯನ್ ಫಾರ್ಮಿಂಗ ಪತ್ರಿಕೆ”ದಲ್ಲಿ ಪ್ರಸಿದ್ಧವಾದ ಮಾವಿನ ತಿಳಲನ್ನು ಆಹಾರ ಪದಾರ್ಥವೆಂಬ ಬಗ್ಗೆ ಬರೆದ ಲೇಖದ ಪ್ರತಿಯೊಂದನ್ನು ಡಾ. ಗೋಪೀಚಂದ ಭಾರ್ಗವರು ಕಳಿಸಿದ್ದಾರೆ. ಅದರ ಆಶಯ:—

“ಗಂಜಾಮು ಜಿಲ್ಲೆಯ ಕೊಂಡ ಪರ್ವತ ಪ್ರದೇಶದಲ್ಲಿಯ ಜನ ಆಹಾರಕ್ಕಾಗಿ ಮಾವಿನ ತಿಳಲನ್ನು ತಿನ್ನುವದು ರೂಢಿಯಾಗಿ ಬಿಟ್ಟಿದೆ. ಹಿಂದುಸ್ತಾನದಲ್ಲಿ ಇನ್ನು ಕೆಲ ಭಾಗಗಳಲ್ಲಿ ಇದು ಸಿಕ್ಕುವುದು. ಆದರೆ ಅದಷ್ಟೊಂದು ಪ್ರಸಾರವಾದಂತೆ ತೋರುವದಿಲ್ಲ. ಆದರೆ ಜನರು ಆರ್ಥಿಕ ಅವಶ್ಯಕತೆಯಿಂದು ಮೊದಲು ಅತ್ತ ಧಾವಿಸಿರಬಹುದು. ಆದರೆ ಎಲ್ಲ ವರ್ಗದವರು, ಯಾರಲ್ಲಿ ಬೇಕಾದಷ್ಟು ಬೇರೆ ಆಹಾರ ಪದಾರ್ಥಗಳಿರುವುವೊ ಅಂಥವರು ಸಹಿತ ಆ ಸುಗ್ಗಿಯಲ್ಲಿ ತಮ್ಮ ಆಹಾರದಲ್ಲಿ ಇದನ್ನು ಹೆಚ್ಚಾಗಿ ಕೂಡಿಸಿಕೊಳ್ಳುತ್ತಾರೆ.

ಲೇಖವು ಇಂತು ಕೊನೆಗಂಡಿದೆ.

ಅತಿ ದರಿದ್ರ ಕೊಂಡರು ಪ್ರತಿ ವರ್ಷ ಕೆಲ ತಿಂಗಳ ವರೆಗಾದರೂ ಉಪಯೋಗಿಸುತಿರುವ ಈ ಮಾವಿನ ತಿಳಲು ಮಹತ್ವದ ಆಹಾರ ಧಾನ್ಯವೆಂದು ಪರಿಗಣಿಸಲಾಗದಿದ್ದರೂ ಜನರು ತಮ್ಮ ಅಕ್ಕಿಯ ಪೂರೈಕೆಯನ್ನು ಅದರಿಂದ ಏಕೆ ಹೆಚ್ಚಿಸಿಕೊಳ್ಳುವುದಿಲ್ಲವೊ ತಿಳಿಯದಾಗಿದೆ. ಹಿಂದುಸ್ತಾನದಲ್ಲಿ ಪ್ರತಿಯೊಂದು ಕಡೆ ಸಿಕ್ಕುತಿರುವ ದೇಶೀ ಮಾವಿನ ಹಣ್ಣುಗಳನ್ನೆ ಇದಕ್ಕಾಗಿ ಉಪಯೋಗಿಸಲಾಗುತ್ತದೆ. ಕಲ್ಲುಗಳನ್ನು ಕಾಯ್ದಿಟ್ಟು ಹೊರದೆಗೆದ ತಿಳಲನ್ನು ಒಗರು ಹೋಗುವ ವರೆಗೆ ತೊಳೆದು ಬಿಟ್ಟರೆ ಸಾಕು ಬೇರೆ ಏನನ್ನೂ ಮಾಡಬೇಕಿಲ್ಲ.

ಮಸೂರಿ ಪ್ಯಾರೇಲಾಲ
೬-೬-೪೬

## ಬಂಗಾಲ—ಆಸಾಮ

ಆಸಾಮದ ಕರಿಮಪುರ ಚಹಾದ ತೋಟದಲ್ಲಿ ೧೯೪೪ ಜೂನ ೧೮ ಕ್ಕೆ ಗುಡಿಸಲು ಬಿದ್ದು ೩೫೦ ಜನ ಕೆಲಸಗಾರರು ಮರಣ ಹೊಂದಿದ್ದಲ್ಲದೆ ಇನ್ನು ಅನೇಕರಿಗೆ ವಿಶೇಷ ಗಾಯ ಸಂಭವಿಸಿದ ಬಗ್ಗೆ ಕ್ರಾಮಫೋರ್ಡ ಎಂಬವನ ಮೇಲೆ ಹಾಕಿದ ಖಟ್ಲೆಯ ವಿಚಾರಣೆಯು ಬಜಾರ ಸಬ್ ಡಿವಿಜನಲ್ ಮ್ಯಾಜಿಸ್ಟ್ರೇಟ ಕೋರ್ಟಿನಲ್ಲಿ ಪ್ರಾರಂಭವಾಗಿದೆ.

ಬಂಗಾಲದಲ್ಲಿ ೧೯೪೩ ರ ಭೀಕರ ಬರಗಾಲ ಸಂಭವಿಸಿದ ನಂತರ ಮೂರು ವರ್ಷಗಳಲ್ಲಿಯೆ ಮತ್ತೊಂದು ಬರಗಾಲ ತಲೆಯೆತ್ತುತಿದೆಂದು ಬಂಗಾಲ ಶಾಸನ ಸಭೆಯ ಕಮ್ಯುನಿಸ್ಟ ಸದಸ್ಯರು ಬಂಗಾಲ ಸರಕಾರಕ್ಕೂ ಮಂತ್ರಿಮಂಡಳಕ್ಕೂ ಮನವಿ ಕಳಿಸಿದ್ದಾರೆ.

ಬಂಗಾಲ ಮೇಲ್ಮನೆಗೆ ಮುಸ್ಲಿಂಲೀಗಿನ ೬ ಜನ ಮತ್ತು ಕಾಂಗ್ರೆಸ್ಸಿನ ೩ ಜನ ಪ್ರತಿನಿಧಿಗಳು ಸದಸ್ಯರಾಗಿ ಆರಿಸಿ ಬಂದಿರುವರು.

## ಕಾಶ್ಮೀರದಲ್ಲಿ ಜವಾಹರರ ಬಂಧನವಾದಾಗ

[ಮೊದಲನೆ ಪುಟದಿಂದ]

ಹೇಳಿ ಅವರು ಮಿಲಿಟರಿ ವ್ಯೂಹದ ನಡುವೆ ಮುನ್ನುಗ್ಗಿದರು. "ಇಂಥ ಆಜ್ಞೆಗಳನ್ನು ಎಷ್ಟನ್ನೊ ನಾನು ಹರಿದೊಗೆದಿದ್ದೇನೆ. ಈಗ ಇದನ್ನೂ ಮೆಟ್ಟುವೆ. ಮಹಾರಾಜರಿಂದ ಬರಲಿ, ವಾಯಿಸರಾಯರಿಂದ ಬರಲಿ ಇಂಥ ಆಜ್ಞೆಗಳನ್ನು ನಾನು ಸ್ವೀಕರಿಸುವವನಲ್ಲ.... ನಾನು ಶ್ರೀನಗರವನ್ನು ಬೇಕಾದ್ದು ಬಂದರೂ ಪ್ರವೇಶಿಸುವವನೆ. ನಿಮ್ಮ ಸರಕಾರವನ್ನೇ ನಾನು ಒಪ್ಪುವದಿಲ್ಲ.... ನನ್ನ ಚಲನವಲನಗಳನ್ನು ತಡೆಯಲು ಈ ವರೆಗೆ ಯಾರೂ ಧೈರ್ಯ ಮಾಡಿದ್ದಿಲ್ಲ" ಎಂದು ಗುಡುಗಿದರವರು.

"ನೀವು ಸರಕಾರವನ್ನು ಸೇರಿದಾಗ ನಿಮ್ಮ ಆಜ್ಞೆಗಳನ್ನು ಮುರಿದರೆ ನಿಮಗೆ ಹೇಗನಿಸೀತು?" ಎಂದು "ಬಂಧು" ದಾರರು ಕೇಳಿದರು.

ನೆಹರೂ ತಟ್ಟನೆ ಉತ್ತರಿಸಿದರು:

"ಅದು ಜನಪ್ರಿಯ ಸರಕಾರವಾಗಿರುತದು. ನಿಮ್ಮದು ದಬ್ಬಾಳಿಕೆಯ ಸರಕಾರ.... ನಿಮ್ಮ ಮಹಾರಾಜರು ನನಗೆ ಮಾಡಿದ ಅನ್ಯಾಯಕ್ಕೆ ಸದ್ಯದಲ್ಲಿಯೇ ಕ್ಷಮೆ ಕೇಳಬೇಕಾಗುವದು!"

ಈ ಸಂದಣಿಯನ್ನು ಕಾಯಿದೆ ಬಾಹಿರವೆಂದು ಸಾರಿ ಗುಂಡು ಹಾರಿಸಲು ಆಜ್ಞಾಪಿಸುವೆ, ಎಂದು ಗದರಿಸಿದರು ಮ್ಯಾಜಿಸ್ಟ್ರೇಟರು.

"ಕೆಲವರು ಸತ್ತರೆ ಚಿಂತೆಯಿಲ್ಲ. ನಿಮ್ಮ ಕೃತಿಯಿಂದ ನನ್ನ ಕಾರ್ಯಕ್ಕೆ ಇನ್ನಷ್ಟು ಪುಷ್ಟಿ ದೊರೆಯುವದು.... .... ನಿಮ್ಮ ಗೋಲೀಬಾರ ಬಂದರೂ ನಾನು ಶ್ರೀನಗರಕ್ಕೆ ಮುಟ್ಟಿಯೆ ತೀರುವೆ!"

—ಈ ಸಂವಾದ, ಸುದ್ದಿಗಾರರ ವರದಿಯ ಮೇರೆಗೆ, ಅವರಲ್ಲಿ ನಡೆಯಿತು.

### ಆ ಕಪ್ಪು ಪತಾಕೆಗಳು !

ಇದಾಗುವ ಮೊದಲು ಜಿಲ್ಲಾ ಮ್ಯಾಜಿಸ್ಟ್ರೇಟರು ಮೇಲಧಿಕಾರಿಗಳೊಡನೆ ಸಂಪರ್ಕ ಬೆಳಸಿ ತಿಳಿಸುವದಾಗಿ ನೆಹರೂ ಅವರಿಗೆ ಹೇಳಿದ್ದರು. ವಾಯರಲೆಸ್ ಸಂಪರ್ಕ ಸೌಕರ್ಯವಿದ್ದ ಆ ಅಧಿಕಾರಿ ಶ್ರೀನಗರದೊಡನೆ ಮಾತಾಡಿದರು. ಆದರೆ ಉತ್ತರವೇ ಬರಲಿಲ್ಲ. ಆ ವರೆಗೆ ನೆಹರೂ ಅವರೂ ಅವರ ಸಂಗಡಿಗರೂ ರಸ್ತೆಯ ಬಳಿ ಕಾಯುತ್ತ ಕುಳಿತಿದ್ದರು. ಎಂಟು ಗಂಟೆಯವರೆಗೆ ಕಾದು ಬೇಸತ್ತು ನೆಹರೂ ಮುನ್ನುಗ್ಗುವ ನಿರ್ಧಾರ ಮಾಡಿದರು.

ಅವರು ಅಲ್ಲಿ ಕಾಯುತ್ತ ಕುಳಿತಾಗ ಈ ಗಂಭೀರ ವಾತಾವರಣದಲ್ಲಿ ವಿನೋದ ಪ್ರಸಂಗವೊಂದು ನಡೆಯಿತು. ಪೋಲೀಸರೊಡನೆ ಲಾರಿಯಲ್ಲಿ ಕೆಲವರು ಕಪ್ಪು ಧ್ವಜಗಳೊಡನೆ ಬಂದಿದ್ದರು. ನೆಹರೂ ಕಾಶ್ಮೀರ ಗಡಿಯನ್ನು ದಾಟಿದೊಡನೆ ಅವರು "ನೆಹರೂ ಗೋ ಬ್ಯಾಕ್" (ನೆಹರೂ ಹಿಂದೆ ಹೋಗು !) ಎಂದು ಅರಚಿಕೊಳ್ಳುತಿದ್ದರು. ಪೋಲೀಸರು ಸನ್ನೆ ಮಾಡಿದೊಡನೆ ತಮ್ಮ ಕೂಗಾಟ ನಿಲ್ಲಿಸುತಿದ್ದರು. ಈ ಮನುಷ್ಯರಲ್ಲಿ ಕೆಲವರು ಮುಂದೆ ಜವಾಹರರ ಬಳಿಗೆ ಬಂದು ಖಾಸಗಿಯಾಗಿ ಕ್ಷಮಾಪಣೆ ಬೇಡಿದರು. "ಈ ಕೆಲಸ ಮಾಡಿದ್ದಕ್ಕೆ ನಮಗೆ ದುಡ್ಡು ಕೊಟ್ಟಿದ್ದಾರೆ!" ಎಂದು ಅವರು ಒಪ್ಪಿಕೊಂಡರು. ಈ ಸನ್ನಿವೇಶವನ್ನು ದಿಲ್ಲಿಯಲ್ಲಿ ನೆಹರೂ ಅವರೇ ಹೊರಗೆಡಹಿದರು.

### ದೋಮೆಲ್ಲಿಗೆ ಪ್ರಯಾಣ

ಹೀಗೆ ಮಿಲಿಟರಿಯ ತಡೆಯನ್ನೂ ಲೆಕ್ಕಿಸದೆ ಈ "ಮುತ್ತಿಗೆಗಾರರು" ಮುನ್ನುಗ್ಗಿದರು. ಅವರೊಡನೆ ೧೬—೨೦ ಜನ ಕೋಹಲಾ ನಿವಾಸಿಗಳೂ ಇದ್ದರು, ಹೆಚ್ಚಿಗೆ ಯಾರೂ ಇರಲಿಲ್ಲ, ಎನ್ನುತ್ತಾರೆ ನೆಹರೂ. "ನಾವು ೨೫೦ ಗಜ ಮುಂದೆ ಹೋಗಿರಬಹುದು. ಮಿಲಿಟರಿಯವರೂ ಪೋಲೀಸರೂ ಸೇರಿದ ಒಂದು ಮೆರವಣಿಗೆಯೆ ಆದಾಗಿತ್ತೆಂದು ಹೇಳಬಹುದು....... ನಮ್ಮನ್ನು ಬಂಧಿಸಲಾಗಿದೆಯೇನೆಂದು ಜಿಲ್ಲಾ ಮ್ಯಾಜಿಸ್ಟ್ರೇಟರನ್ನು ಕೇಳಿದೆವು. ಇಲ್ಲವೆಂದಿದ್ದರು ಅವರು. ಹಾಗಾದರೆ ನಾವು ಮುಂದುವರಿಯುವುದಾಗಿ ತಿಳಿಸಿದೆವು....... ಕೊನೆಗೆ ಅವರು ತಮ್ಮ ಪೋಲೀಸರನ್ನೂ ಮಿಲಿಟರಿಯವರನ್ನೂ ಹಿಂತೆಗೆದುಕೊಂಡರು. ನಾವು ಏನೋ ಒಂದು ಬಗೆಯ ಊಟ ಮಾಡಿ ದೋಮೆಲ್ಲಿಗೆ ಪ್ರಯಾಣ ಬೆಳಸಿದೆವು."

### ಬಂಧನ ?

ಆ ರಾತ್ರಿಯನ್ನು ಅವರು ದೊಮೆಲ್ಲದಲ್ಲಿ ಕಳೆದರು. ರಾತ್ರಿಯೆಲ್ಲ ಕಾಶ್ಮೀರ ಸರಕಾರ ಚಿಂತನೆಯಲ್ಲಿ ಮುಳುಗಿರಬೇಕು. ಇಷ್ಟು ದೂರ ಹೋದ ಮೇಲೆ ಮರಳುವದು ಸಾಧ್ಯವಿದ್ದಿಲ್ಲ. ನೆಹರೂ ಅವರನ್ನು ಹಿಂತಿರುಗುವಂತೆ ಮನವೊಲಿಸುವದು ಸಾಧ್ಯತೆಯ ಹೊರಗಿನ ಮಾತಾಗಿತ್ತು. ಅದ್ದರಿಂದ ತಾ. ೨೦ ಮುಂಜಾನೆ ಅವರಿಗೆ ನೀವು ಬಂಧನಪ್ರಾಯರಾಗಿರುವಿರೆಂದು ತಿಳಿಸಲಾಯಿತು. ಅವರನ್ನು "ಬಂಧಿಸಲು" ಶ್ರೀನಗರದಿಂದ ಬಿಳಿಯ ಮಿಲಿಟರಿ ಅಧಿಕಾರಿಯೊಬ್ಬನನ್ನು ಕಳಿಸಲಾಗಿತ್ತು. ಆಸಫಅಲ್ಲಿ ಮತ್ತು ಚಮನಲಾಲರನ್ನು ಸಂಜೆಯ ಹೊತ್ತಿಗೆ ಶ್ರೀನಗರಕ್ಕೆ ತೆರಳಲು ಬಿಟ್ಟರು. ರಾತ್ರಿಯಲ್ಲಿ ಅವರನ್ನು ದೊಮೆಲ್ಲದಿಂದ ೫೦ ಮೈಲು ದೂರದ ಉರಿಗೆ ಒಯ್ದರು. "ಉರಿ ಡಾಕ ಬಂಗಲೆಯನ್ನು ಒಂದು ಬಗೆಯ ಸೆರೆಮನೆಯನ್ನಾಗಿ ಮಾರ್ಪಡಿಸಿದರು ಅದನ್ನು ಸೈನಿಕ ಕಾವಲಿಗರು ಕಾಯುತಿದ್ದರು."

ಜವಾಹರರನ್ನು ಬಂಧನದಲ್ಲಿರಿಸಿ, ಕಾಶ್ಮೀರ ಸರಕಾರ ತನ್ನ ದುರ್ನಯದ ಪರಿಣಾಮವನ್ನು ಕಡಿಮೆ ಮಾಡಲು ಯತ್ನಿಸುತ್ತ ಒಂದು ಹೇಳಿಕೆ ಹೊರಡಿಸಿತು. "ಪಂಡಿತ ನೆಹರೂ ಅವರನ್ನು ಬಂಧಿಸಿಡುವದು ಸರಕಾರದ ಉದ್ದೇಶವಲ್ಲ. ಅವರು ಮನಸು ಬಂದೊಡನೆ ಬ್ರಿಟಿಶ ಹಿಂದುಸ್ತಾನಕ್ಕೆ ಮರಳಬಹುದು," ಎಂದು ಅದು ಸಾರಿತು.

ಹೇಳಿದರು ಕಾಶ್ಮೀರ ಮುಖ್ಯ ಮಂತ್ರಿ ಕಾಕರು: "ನನ್ನ ಸಂಸ್ಥಾನದ ವಿಷಯಗಳಲ್ಲಿ ಹೊರಗಿನವರ ಹಸ್ತಕ್ಷೇಪಕ್ಕೆ ಎಡೆಕೊಡುವದು ನನ್ನ ಧೋರಣೆಯಲ್ಲ."

### ಮೌಲಾನಾರ ಕರೆ

ಈ ಪ್ರಕಾರ ತನ್ನನ್ನು ಇಕ್ಕಟ್ಟಿನಲ್ಲಿ ಸಿಗಿಸಿಕೊಂಡ ಕಾಶ್ಮೀರ ಸರಕಾರಕ್ಕೆ ಎರಡು ದಿನಗಳ ನಂತರ ಕಾಂಗ್ರೆಸ್ ಅಧ್ಯಕ್ಷರೇ ಒಂದು ದಾರಿ ತೋರಿದರೆನ್ನಬೇಕು. ನಡುಗಾಲ ಸರಕಾರದ ವಿಷಯದಲ್ಲಿ ಹೊಸ ಪರಿವರ್ತನೆಗಳು ಉಂಟಾದ್ದರಿಂದ ನೆಹರೂ ಅವರು ದಿಲ್ಲಿಗೆ ಬರುವದು ಅತ್ಯಂತ ಅವಶ್ಯವಾಗಿದೆ. ಅದ್ದರಿಂದ ಶೇಖ ಅಬ್ದುಲ್ಲಾರ ವಿಚಾರಣೆಯನ್ನು ಜುಲೈ ೧ ರ ವರೆಗೆ ಮುಂದುವರಿಸಿ ನೆಹರೂ ಅವರನ್ನು ದಿಲ್ಲಿಗೆ ಕಳಿಸಿರೆಂದು ಅವರು ಕಾಶ್ಮೀರ ಸರಕಾರಕ್ಕೆ ತಂತಿ ಕಳಿಸಿದರು. ನೆಹರೂ ಅವರಿಗೂ ಬರಲೇಬೇಕೆಂದು ಆಜ್ಞೆ ಹೋಯಿತು. "ಈ ಆಜ್ಞೆ ಪಾಲಿಸದೆ ನನಗೆ ಅನ್ಯೋಪಾಯವೇ ಇದ್ದಿಲ್ಲ," ಎನ್ನುತ್ತಾರೆ ಜವಾಹರರು. ಕಾಶ್ಮೀರ ಸರಕಾರವೂ ಶೇಖ ಅಬ್ದುಲ್ಲಾರ ಪ್ರಕರಣದ ವಿಚಾರಣೆಯನ್ನು ಜುಲೈ ೧ ಕ್ಕೆ ಮುಂದುವರಿಸಿತು. ಜವಾಹರರು ದಿಲ್ಲಿಗೆ ಮರಳಿದರು.

### "ಮತ್ತೆ ಮರಳುವೆ"

ಆದರೆ ಜವಾಹರರು ಮರಳಿದ್ದರಿಂದ ಈ ಪ್ರಕರಣ ಇಲ್ಲಿಗೇ ಮುಗಿಯಿತೆಂದಾಗಲಿಲ್ಲ. ಅವರು ಪುನಃ ಕಾಶ್ಮೀರಕ್ಕೆ ಹೋಗುವ ನಿರ್ಧಾರವನ್ನು ಸಾರಿಬಿಟ್ಟಿದ್ದಾರೆ. ಬಹಳ ಮಾಡಿ ಅವರು ಜುಲೈ ೧ ಕ್ಕೆ ಮೊದಲೇ ಅಲ್ಲಿಗೆ ಹೋಗಬಹುದು. ಅ ಮೊದಲು ಕಾಶ್ಮೀರ ಸರಕಾರ ಏನು ನಿರ್ಣಯ ಮಾಡಿಕೊಳ್ಳಬೇಕೋ ಮಾಡಿಕೊಳ್ಳಲಿ.

ಈ ಇಡಿ ಸನ್ನಿವೇಶವನ್ನು ಕುರಿತು ನೆಹರೂ ಹೇಳುವದಿದು:

"ಕಾಶ್ಮೀರವನ್ನು ಕುರಿತು ಈಗಲೆ ಇನ್ನೇನೂ ಹೇಳಲು ನಾನು ಬಯಸುವದಿಲ್ಲ. ಆದರೆ ಈ ಘಟನೆಯಿಂದ ಸಂಸ್ಥಾನಗಳಲ್ಲಿರುವ ಪರಿಸ್ಥಿತಿಯ ಮೇಲೆ ಅರ್ಥವತ್ತಾದ ಬೆಳಕು ಬಿದ್ದಂತಾಗಿದೆ. ನಾನಾಗಲಿ ಇನ್ನಾರಾಗಲಿ ಏಕೆ ಪ್ರವೇಶಿಸಬಾರದು?....

"ಇದರಿಂದ ಹಿಂದುಸ್ತಾನದಲ್ಲಿ ಉಂಟಾಗಿರುವ ಹೊಸ ಪರಿಸ್ಥಿತಿ ಮತ್ತು ಜನತೆಯ ಚಿತ್ತವೃತ್ತಿಯನ್ನು ಕುರಿತು ನರೇಂದ್ರರೂ ಇತರರೂ ಗಹನವಾಗಿ ಆಲೋಚಿಸುವಂತಾದರೆ ಈ ಘಟನೆಗಾಗಿ ನಾನು ವಿಷಾದಪಡುವದಿಲ್ಲ....ಇಂದು ಮಹಾರಾಜರುಗಳಿಗೂ 'ಮಾನ್ಯ'ರಿಗೂ ಜನರ ದೃಷ್ಟಿಯಲ್ಲಿ ಬಹಳ ಬೆಲೆಯಿಲ್ಲ. ಒಬ್ಬ ಮನುಷ್ಯನ ಯೋಗ್ಯತೆ ಅವನು ಜನತೆಯಿಂದ ಎಷ್ಟನ್ನು ತೆಗೆದುಕೊಳ್ಳುವನೆಂಬುದನ್ನು ಹೊಂದಿಕೊಂಡಿರದೆ ಅವನು ತನ್ನ ದುಡಿಮೆ, ಸೇವೆಗಳಿಂದ ಎಷ್ಟು ಕೊಡುತ್ತಾನೆಂಬುದನ್ನೆ ಅವಲಂಬಿಸಿದೆ. ನಮ್ಮಲ್ಲಿ ಪ್ರತಿಯೊಬ್ಬರೂ ಇತರರ ಶ್ರಮದಿಂದ ಪ್ರಯೋಜನ ಪಡೆಯುತ್ತೇವೆ. ಆದರೆ ಸಾಮಾನ್ಯ ನಿಧಿಗೆ ನಾವೆಷ್ಟು ಕೊಡುತ್ತೇವೆಂಬುದೀಗ ಪ್ರಶ್ನೆ. ನಾವು ಕೊಡುವುದಕ್ಕಿಂತ ತೆಗೆದುಕೊಳ್ಳುವದೇ ಹೆಚ್ಚಾದರೆ ನಾವು ಸಮಾಜಕ್ಕೆ ಭಾರಸ್ವರೂಪರಾಗುತ್ತೇವೆ. "ಹಿಂದೆ ಅವರಿಗೆಲ್ಲ ತೆಗೆದುಕೊಳ್ಳುವದೇ ಕೆಲಸವಾಗಿತ್ತು. ಆದರೆ ಭವಿಷ್ಯತ್ತಿಗಾಗಿ ನಮ್ಮ ಸಾಮಾಜಿಕ ಘಟನೆಯಲ್ಲಿ ಹೊಸ ವಿಧಾನವೊಂದು ಉದಯಿಸಿದೆ. ಅದ್ದರಿಂದ ಸತ್ತು ಮಣ್ಣುಮುಕ್ಕಿ ಹೋದ ಒಪ್ಪಂದದ ಹಕ್ಕುಗಳಿಗಾಗಲಿ ವಂಶಾಧಿಕಾರಕ್ಕಾಗಲಿ ಜನತೆಯ ದೃಷ್ಟಿಯಲ್ಲಿ ಏನೂ ಬೆಲೆಯಿಲ್ಲ. ಮಾನವ ಹಕ್ಕಿಗೇ ಬೆಲೆ. ಈ ಮಟ್ಟದಿಂದಲೇ ಎಲ್ಲ ಸಮಸ್ಯೆಗಳನ್ನು ವಿವೇಚಿಸಬೇಕಾಗಿದೆ, ನಿರ್ಣಯಿಸಬೇಕಾಗಿದೆ."







## ಸುದ್ದಿಗಳು

ಬಂಗಾಲದ ಅಸನಸೋಲ ಮತ್ತು ಪುರುಲಿಯಾ ಸರಕಾರೀ ಗುದಾಮುಗಳಲ್ಲಿ ಸುಮಾರು ೨೦ ಸಾವಿರ ಮಣ ಅಕ್ಕಿ ಕೆಟ್ಟು ಹಾಳಾಗಿದೆಂದು ಕಾಂಗ್ರೆಸ ಕಮಿಟಿಯವರು ತಿಳಿಸಲಾಯಿತು. ಈ ಅಕ್ಕಿ ೮ ರೂ. ಗೆ ಮಣದಂತೆ ಮಾರಲು ಪ್ರಯತ್ನಿಸಲು ಯಾರೂ ತಗೆದುಕೊಳ್ಳಲಿಲ್ಲ.

ಪರದೇಶದಿಂದ ಬರುವ ಜವಳಿ ಸರಕಿನ ಮೇಲೆ ಗಡಿನಾಡ ಸರಕಾರದವರು ರೂಪಾಯಿಗೆ ೩ ದುಡ್ಡು ಉಣ್ಣೆ ಹಾಗು ರೇಶ್ಮೆ ಬಟ್ಟೆಯ ಮೇಲೆ ೬ ದುಡ್ಡು ಕರ ಹೇರಲು ನಿರ್ಧರಿಸಿದ್ದಾರೆ.

* * *

ಬಿಹಾರದ ಅಂಥಾಸಾ ಎಂಬಲ್ಲಿ ಕೆಲ ಹಿಂದು—ಮುಸಲ್ಮಾನರಲ್ಲಿ ಬಡೆದಾಟವಾಗಿ ೧೦ ಜನ ಸತ್ತರು ಈಗ ಪರಿಸ್ಥಿತಿ ಶಾಂತವಾಗಿದೆ.

ಅಂಗ್ಲೊ—ಇಜಿಪ್ಶನ್ ಹೊಸ ಒಪ್ಪಂದದ ಕರಡು ಸಿದ್ಧವಾಗಿದ್ದು ಅದರ ತತ್ವವನ್ನು ಇಜಿಪ್ತನ ಸರಕಾರ ಮಾನ್ಯ ಮಾಡಿದೆ.

* * *

ಕೆನಡಾದ ಕಮ್ಯುನಿಸ್ಟ ಪಾರ್ಲಮೆಂಟರಿ ಸದಸ್ಯ ರಾಸನಿಗೆ ಪರಮಾಣು ರಹಸ್ಯವನ್ನು ರಶಿಯನ್ನರಿಗಾಗಿ ದೊರಕಿಸಲೆತ್ನಿಸಿದ್ದಕ್ಕೆ ೬ ವರ್ಷ ಶಿಕ್ಷೆಯಾಯಿತು.

ಕಾಂಗ್ರೆಸ್ಸು ನಡುಗಾಲ ಸರಕಾರ ಯೋಜನೆ ನಿರಾಕರಿಸುವ ಎದೆಗಾರಿಕೆ ತೋರಿಸುವದೇ ಎಂದು ಸರ್ ಸ್ಟಾಫರ್ಡರು ಮಹಾತ್ಮರನ್ನು ಅಪ್ಪಾಜಿಸಿದ್ದೇ ಕಾಂಗ್ರೆಸ್ಸಿನ ಬಿಗುಹಿನ ಧೋರಣೆಗೆ ಕಾರಣವೆಂದು ಹೇಳಲಾಗುತ್ತದೆ.

# ಜನಾನುರಾಗ ಪಡೆದ ಸರಕಾರ ಬೇಕೆಂದು ಒತ್ತಾಯ

## ಮೈಸೂರು ವಿಧಾಯಕ ಸಭೆಯಲ್ಲಿ ಆಯವ್ಯಯ ಅಧಿವೇಶನ

### ಆಯವ್ಯಯ ಪತ್ರಿಕೆಯ ಮೇಲೆ ಟೀಕೆಗಳು

ಮೈಸೂರ ನ್ಯಾಯವಿಧಾಯಕ ಸಭೆಯ ಆಯವ್ಯಯ ಅಧಿವೇಶನ ತಾ ೨೦ ಕ್ಕೆ ಅಧ್ಯಕ್ಷ ಶ್ರೀ ಎಚ್ ಬಿ ಗುಂಡಪ್ಪಗೌಡರ ಸಭಾಪತಿತ್ವದಲ್ಲಿ ಆರಂಭವಾಯಿತು.

ಸ್ವರ್ಗಸ್ಥ ಸದಸ್ಯರ ಬಗ್ಗೆ ವಿಷಾದ ಸೂಚನೆ, ಹೊಸ ಸದಸ್ಯರ ಪ್ರತಿಜ್ಞಾವಿಧಿ, ಪ್ರಶ್ನೋತ್ತರಗಳ ನಂತರ ಸರಕಾರದ ಪರವಾಗಿ ಮಸೂದೆಗಳನ್ನು ಮುಂಡಿಸಲಾಯಿತು.

### ಜನ ಪ್ರತಿನಿಧಿ ಸರಕಾರವಲ್ಲ

ಸರಕಾರದ ಮೊದಲನೆ ಮಸೂದೆಯನ್ನು ಶಾಸನ ಮಂತ್ರಿ ಓ. ಎನ್. ಶರೀಫರು ಮಂಡಿಸಿದರು. ಅದು ೧೯೪೪ ರ ಅಕ್ರಮ ಸಂಗ್ರಹ ಮತ್ತು ಲಾಭಬಡಕತನ ಪ್ರತಿರೋಧ ಕಾಯಿದೆಯ ತಿದ್ದುಪಡಿ ಮಸೂದೆಯಾಗಿತ್ತು. ಕಾಂಗ್ರೆಸ್, ಪ್ರಜಾ ಪಕ್ಷಗಳ ವಿರೋಧವಿದ್ದರೂ ನಾಮಕರಣ ಸದಸ್ಯರಿಂದ ತುಂಬಿದ ನ್ಯಾಯವಿಧಾಯಕ ಸಭೆಯಲ್ಲಿ ಅದನ್ನು ಪಾಸು ಮಾಡಿಕೊಳ್ಳುವದು ಸರಕಾರಕ್ಕೆ ಕಠಿಣವಾಗಲಿಲ್ಲ. ಅದು ಚರ್ಚೆಯ ೨ ನೆ ದಿನ ೪೩ ವಿರುದ್ಧ ೩೦ ಮತಗಳಿಂದ ಅಂಗೀಕೃತವಾಯಿತು.

ಕಾಂಗ್ರೆಸ್, ಪ್ರಜಾ ಪಕ್ಷಗಳ ವಿರೋಧ ಮುಖ್ಯವಾಗಿ ರಾಜಕೀಯ ಕಾರಣಗಳಿಂದ ಪ್ರೇರಿಸಲ್ಪಟ್ಟಿತ್ತು. ಕಾಂಗ್ರೆಸ ಪಕ್ಷದ ಶ್ರೀ ಮರಿಯಪ್ಪನವರು ಈ ಮಸೂದೆಯ ತತ್ವ ನ್ಯಾಯವಾದುದಿದ್ದರೂ ಜನಾನುರಾಗಕ್ಕೆ ಪಾತ್ರವಾಗದ ಮಂತ್ರಿಮಂಡಲದ ಕೈಯಲ್ಲಿ ಇಂಥ ಕಾಯಿದೆಗಳು ಅಪಾಯಕರವಾಗಿವೆಯೆಂದು ಸಾಧಿಸಿದರು. ಆದರೆ ಅಪ್ರಾಸಪಾನರು ಈ ಮಂತ್ರಿಮಂಡಲಕ್ಕೆ ಜನಾನುರಾಗವಿದೆಯೆಂದು ಆಹ್ವಾನವಿತ್ತರು. ಇದಕ್ಕಾಗಿ ರೆಫರೆಂಡಂ (ಜನ ಮತ ಸಂಗ್ರಹ) ಕೂಡಬಹುದೆಂದು ಅವರ ಆಹ್ವಾನವಾಗಿತ್ತು. ಪ್ರಜಾಪಕ್ಷದ ಗುರುವಾರೆಡ್ಡಿಯವರು ಮಂತ್ರಿಗಳಿಗಿರಬಹುದಾದ ಜನಾನುರಾಗ ಸರ್ವಾಧಿಕಾರದಿಂದ ಬಂದುದಾದುದರಿಂದ ಅವರಿಂದ ಉಪಕಾರವಾಗಲಾರದೆಂದರು. ಕಾಂಗ್ರೆಸ್ ಪಕ್ಷದ ನಾಯಕ ಶ್ರೀ ಕೆ. ಚೆಂಗಲರಾಯ ರೆಡ್ಡಿಯವರು ಈ ಸರಕಾರಕ್ಕೆ ಜನಾನುರಾಗವಿದೆಯೆಂಬುದು ಬರಿ ಬೂಟಾಟಿಕೆಯೆಂದರು. ಔಷಧ ಚನ್ನಾಗಿದ್ದರೂ ವೈದ್ಯ ಚೆನ್ನಾಗಿರದಿದ್ದರೆ ಹಿತವಲ್ಲವೆಂದು ಅವರ ಹೇಳಿಕೆಯಾಗಿತ್ತು. ಶಾಸನ ಸಚಿವರು ಉತ್ತರದಲ್ಲಿ ಘಟನೆಯ ಪ್ರಶ್ನೆಯಲ್ಲಿ ಜನರಿಗೆ ಅಸಮಾಧಾನವಿರಬಹುದಾದರೂ ಆ ಪ್ರಶ್ನೆ ಶ್ರೀಮನ್ಮಹಾರಾಜರಿಗೆ ಸೇರಿದ್ದೆಂದು ಕೈಕೊಡವಿಕೊಂಡು ಬಿಟ್ಟರು. ಕಾಂಗ್ರೆಸ್ಸಿನವರು ಮಸೂದೆಯ ಗುಣಗಳ ಮೇಲೆ ಟೀಕೆ ಮಾಡಲಿಲ್ಲೆಂದು ತಮ್ಮನ್ನು ಸಮರ್ಥಿಸಿಕೊಂಡರು.

ಮೈಸೂರು ಆದಾಯ ತೆರಿಗೆ ತಿದ್ದುಪಡಿ ಮಸೂದೆಯೂ ಚರ್ಚೆಯಿಲ್ಲದೆ ಸ್ವೀಕೃತವಾಯಿತು. ಕಾಂಗ್ರೆಸ್ ಪಕ್ಷ ಅದನ್ನೂ ವಿರೋಧಿಸಿತ್ತು.

### ದಿವಾಣರ ಕೈವಾಡ

ಘಟನಾ ಸಮಿತಿಗೆ ಮೈಸೂರಿನ ಪ್ರತಿನಿಧಿಗಳ ನ್ನಾರಿಸುವ ವಿಚಾರದಲ್ಲಿ ಪ್ರಜಾಪ್ರತಿನಿಧಿಗಳ ಸಲಹೆ ಈ ವರೆಗೂ ಕೇಳಿಲ್ಲವೆಂಬ ಬಗ್ಗೆ ಕಾಂಗ್ರೆಸ ಪಕ್ಷ ತಂದ ನಿಲುವಳಿ ಸೂಚನೆಗೆ ಸಭಾನಾಯಕರು ಎತ್ತಿದ ಆಕ್ಷೇಪವನ್ನು ಕಿತ್ತು ಹಾಕಿ (ತಾ ೨೧) ಅಧ್ಯಕ್ಷರು ಅನುಮತಿ ಕೊಟ್ಟಿದ್ದರು. ಆದರೆ ದಿವಾಣರು ಇಷ್ಟೆಲ್ಲ ಆದ ಮೇಲೆ ಈ ನಿಲುವಳಿಯ ಚರ್ಚೆಗೆ ಅನುಮತಿ ಕೊಡದಿದ್ದುದರಿಂದ ಅದು ಚರ್ಚೆಗೆ ಬರಲಿಲ್ಲ.

### ಆಯವ್ಯಯ ಚರ್ಚೆ

ತಾ ೨೧ ಕ್ಕೆ ಸರಕಾರ ಮುಂಗಡ ಪತ್ರಿಕೆಯನ್ನು ಮುಂಡಿಸಿತು. ಸಾಮಾನ್ಯ ಚರ್ಚೆಯನ್ನು ಕಾಂಗ್ರೆಸ ಪಕ್ಷದ ಶ್ರೀ ಮರಿಯಪ್ಪನವರು ಪ್ರಾರಂಭಿಸಿದರು. ಪ್ರತಿನಿಧಿಗಳು ಕೊಡುವ ಸಲಹೆಗಳಿಗೆ ಸರಕಾರ ಏನೂ ಗಮನ ಕೊಡುತ್ತಿಲ್ಲವೆಂದೂ ಬಿಳಿ ನೌಕರಶಾಹಿಗಿಂತ ಕಂದು ಬಣ್ಣದ ನೌಕರಶಾಹಿ ಹೆಚ್ಚು ಅಧ್ವಾನವಾಗಿದೆಯೆಂದೂ ಅವರು ಟೀಕಿಸಿದ್ದಲ್ಲದೆ ರಾಜಕೀಯ ವಿಚಾರದಲ್ಲಿ ಪ್ರಭುಗಳಿಗೆ ಸಲಹೆ ಕೊಡುವ ಅಧಿಕಾರವಿದ್ದರೂ ಮಂತ್ರಿಗಳೂ ಹಾಗೆ ಮಾಡುತ್ತಿಲ್ಲವೆಂದು ಆಕ್ಷೇಪಿಸಿದರು.

ಅನೇಕ ಸದಸ್ಯರು ಆಯವ್ಯಯ ಪತ್ರಿಕೆಯ ವಿವಿಧ ಅಂಗಗಳನ್ನು ಟೀಕಿಸಿ ಮಾತನಾಡಿದರು. ವಿದ್ಯಾಭ್ಯಾಸಕ್ಕೆ ಬಹಳ ಹಣ ಮಂಜೂರು ಮಾಡಿದ್ದರೂ ಹಳ್ಳಿಗಳಿಗೆ ಸಾಕಷ್ಟು ಕೊಡದೆ ಒಂದು ಕಣ್ಣಿಗೆ ಸುಣ್ಣ ಇನ್ನೊಂದಕ್ಕೆ ಬೆಣ್ಣೆ ಮಾಡುತಿರುವದಾಗಿ ಮಾದಯ್ಯನವರು (ಕಾಂ) ಆಕ್ಷೇಪಿಸಿದರು. ಶ್ರೀಬೇಲೂರು ಶ್ರೀನಿವಾಸಯ್ಯಂಗಾರರು ಸಂಸ್ಥಾನದಿಂದ ಬ್ರಿಟಿಶ ಅರಸರಿಗೆ ಕೊಡುವ ಕಪ್ಪ ಇನ್ನೂ ನಿಲ್ಲದ್ದನ್ನು ಟೀಕಿಸಿದ್ದಲ್ಲದೆ, ಘಟನಾ ಸಮಿತಿಯ ಸಂಸ್ಥಾನ ಸಂಧಾನ ಸಮಿತಿಯಲ್ಲಿ ಮೈಸೂರಿಗೆ ಸ್ಥಾನ ದೊರಕಿಸಿಕೊಳ್ಳಲಾರದೆ ಅದನ್ನು ಚಿಕ್ಕ ಸಂಸ್ಥಾನಗಳ ಸಾಲಿಗೆ ಸೇರಿಸಗೊಟ್ಟಿದ್ದಕ್ಕೆ ಸರಕಾರವನ್ನು ತೆಗಳಿದರು. ಶ್ರೀಮತಿ ಕಮಲಾದೇವಿ (ಕಾಂ) ಯವರು ಅಧಿಕ ಲಾಭದ ತೆರಿಗೆಯನ್ನು ನಿಲ್ಲಿಸಿದ್ದು ಪ್ರಗತಿದಾಯಕವಲ್ಲವೆಂದು ಟೀಕಿಸಿದರೆ, ಶ್ರೀಮತಿ ಎಂ ಆರ್ ಲಕ್ಷ್ಮಮ್ಮ (ಕಾಂ) ನವರು ಸ್ತ್ರೀ ವಿದ್ಯಾಭ್ಯಾಸ ಅಡ್ಡದಾರಿ ಹಿಡಿದು ಮಹಿಳೆಯರನ್ನು ಉತ್ತಮ ಗೃಹಿಣಿಯರನ್ನಾಗಿ ಸಮಾಜದ ಇತರ ರಂಗಗಳಲ್ಲಿ ಪುರುಷರೊಡನೆ ಸಮಾನಿಕರನ್ನಾಗಲಿ ಮಾಡಲು ಅಸಮರ್ಥವಾಗಿದೆಯೆಂದರು. ಶ್ರೀ ಎಂ ಗೋಪಾಲಸ್ವಾಮಿ ಅಯ್ಯಂಗಾರರು ಸರಕಾರದ ಆಡಳಿತದಲ್ಲಿ ಈಗೀಗ ಅರಮನೆ ಪ್ರಭಾವ ಹೆಚ್ಚಾಗುತಿದೆಯೆಂದದ್ದಲ್ಲದೆ ಮೈಸೂರಿಗೊಂದು ಘಟನಾ ಸಮಿತಿ ಬೇಕೆಂದು ವಾದಿಸಿದರು.

ಇನ್ನೂ ಚರ್ಚೆ ಮುಗಿದಿಲ್ಲ.

## ದಕ್ಷಿಣ ಕನ್ನಡ

ಮಂಗಳೂರು ಜಪ್ಪುಪಟ್ಟಣದಲ್ಲಿ ಬಿರುಗಾಳಿಯಿಂದ ತಾ. ೧೭ ದಿನ ಹಲವು ಮನೆಗಳು ಬಿದ್ದು ಸೊತ್ತಿಗೆ ಧಕ್ಕೆಯುಂಟಾಗಿದೆ.

ನೆಹರೂ ಅವರನ್ನು ಕಾಶ್ಮೀರ ಸಂಸ್ಥಾನದಲ್ಲಿ ಬಂಧಿಸಿದ್ದರ ನಿಷೇಧಾರ್ಥ ಮಂಗಳೂರಲ್ಲಿ ತಾ. ೨೧ ಕ್ಕೆ ಸಂಪೂರ್ಣ ಹರತಾಳ ಆಚರಿಸಲ್ಪಟ್ಟಿತು. ಸಂಜೆಯಲ್ಲಿ ಕಮ್ಯುನಿಸ್ಟರ ಆಶ್ರಯದಲ್ಲಿ ಒಂದು ಮತ್ತು ಕಾಂಗ್ರೆಸ್ಸಿಗರ ಆಶ್ರಯದಲ್ಲಿ ಒಂದು ಹೀಗೆ ಎರಡು ಸಭೆಗಳು ಕ್ರಮವಾಗಿ ಶ್ರೀ ಎನ್ ಎಲ್ ಉಪಾಧ್ಯಾಯ ಮತ್ತು ಬಿ. ದಾಮೋದರ ಬಾಳಿಗರ ಅಧ್ಯಕ್ಷತೆಯಲ್ಲಿ ಜರಗಿ ಕಾಶ್ಮೀರ ಸರಕಾರದ ವರ್ತನೆಯನ್ನು ಖಂಡಿಸಲಾಯಿತು.

ದಕ್ಷಿಣ ಕನ್ನಡದ. ಪ್ರಮುಖ ಆಸ್ಪತ್ರೆಯಾದ ಕಂಕನಾಡಿಯ ಫಾದರ ಮುಲ್ಲರ್ಸ ಆಸ್ಪತ್ರೆಯಲ್ಲಿ ಕಳೆದ ೫೦ ವರ್ಷಗಳಿಂದ ವೈದ್ಯಕೀಯ ಉಪಚಾರ ನಡೆಸಿದ್ದ ಡಾ. ಎಲ್ ಸಿ ಫರ್ನಾಂಡೀಸರು ತಾ ೨೦ ದಿನ ಸ್ವರ್ಗವಾಸಿಗಳಾದರೆಂದು ತಿಳಿಸಲು ವಿಷಾದವಾಗುತ್ತದೆ. ದಿವಂಗತರು ಲೋಕಪ್ರಿಯರಾಗಿದ್ದು ಸಾರ್ವಜನಿಕ ಚಟುವಟಿಕೆಗಳಲ್ಲಿಯೂ ಆಸ್ಥೆ ವಹಿಸಿದ್ದರು.

ಮಂಗಳೂರು ಜಿಲ್ಹಾ ಬೋರ್ಡಿನ ಸಭೆಯೊಂದು ತಾ. ೨೦ ಕ್ಕೆ ಅಧ್ಯಕ್ಷ ಅರೂರವರ ಸಭಾಪತಿತ್ವದಲ್ಲಿ ನಡೆದು, ಜಿಲ್ಹಾ ಬೋರ್ಡಿನ ಸದಸ್ಯ ಸ್ಥಾನಗಳಲ್ಲಿ ಜನಸಂಖ್ಯಾ ಪ್ರಮಾಣದಿಂದ ಉಡುಪಿ, ಕಾರ್ಕಳ ತಾಲೂಕುಗಳಿಗೆ ಒಂದೊಂದು ಸ್ಥಾನ ಹೆಚ್ಚು ಮತ್ತು ಕಾಸರಗೋಡಿಗೆ ೨ ಸ್ಥಾನ ಕಡಿಮೆ ಇರುವದರಿಂದ ಅದನ್ನು ಸರಿಪಡಿಸಿ ಕಾಸರಗೋಡಿಗೆ ೨ ಸ್ಥಾನ ಕೊಡಿಸಬಹುದೆಂಬ ಜಿ. ಬೋರ್ಡುಗಳ ಡೆ. ಇನಸ್ಪೆಕ್ಟರರ ಸೂಚನೆ ಬಿದ್ದುಹೋಯಿತು. ಜಿ. ಬೋರ್ಡಿನಿಂದ ಲಾಯಸನ್ಸ ಪಡೆದ ಹಾಟೆಲುಗಳಲ್ಲೆಲ್ಲ ಹರಿಜನರಿಗೆ ಪ್ರವೇಶ ಹಾಗು ಸತ್ಕಾರ ನಿರಾಕರಿಸಲ್ಪಡಬಾರದೆಂದು ಮುಂದೆ ಲೈಸನ್ಸ ಕೊಡುವಾಗ ವಿಧಿಸಬೇಕೆಂಬ ಶ್ರೀ ಶಂಕರನ್ನರ ಗೊತ್ತುವಳಿ ಪಾಸಾಯಿತು. ಜಿ. ಬೋರ್ಡಿನಿಂದ ಮದ್ರಾಸ ಸಿನೇಟಿಗೆ ಶ್ರೀ ಸರ್ವೋತ್ತಮ ಪೈಯವರನ್ನು ಆರಿಸಲಾಯಿತು.

ಮಂಗಳೂರ ನಗರ ಸಭೆಯವರೂ ಉಪಹಾರ ಮಂದಿರಗಳಿಗೆ ಲಾಯಸನ್ಸ ಕೊಡುವಾಗ ಜಾತಿಭೇದ ಕಾರಣದಿಂದ ಯಾವನಿಗೂ ಪ್ರವೇಶ ಸತ್ಕಾರಗಳನ್ನು ನಿರಾಕರಿಸಕೂಡದೆಂಬ ಕರಾರು ಹಾಕಲು ನಿರ್ಧರಿಸಿದ್ದಾರೆ.

## ಅಮೇರಿಕೆಗೆ ಕನ್ನಡಿಗರು



ಎಸ್. ಕೆ. ಸೂಜಿ



ಎಸ್. ಆನಂದರಾಯರು

ಇವರು ಇದೇ ತಾ. ೨೭ ಕ್ಕೆ ಮೋಟರ ಯಂತ್ರ ವಿದ್ಯೆ ಅಭ್ಯಸಿಸಲು ಅಮೇರಿಕೆಗೆ ಮುಂಬಯಿ ಪ್ರೀಮಿಯರ್ ಆಟೋಮೊಬಾಯಲ್ಸ್ ಕಂಪನಿ ಪರವಾಗಿ ಹೋದರು. ಶ್ರೀ ಸೂಜಿಯವರು ಹುಬ್ಬಳ್ಳಿಯವರಿದ್ದು, ಶ್ರೀ ಆನಂದರಾಯರು ಮಂಗಳೂರಿನವರಿರುವರು.

# ವ್ಯಾಪಾರ ಪ್ರಪಂಚ

ಜೂನ ೨೬

## ಮುಂಬಯಿ ಶೇರ ಪೇಟೆ

ಟಾಟಾ ಸ್ಟೀಲ ಪಾಲುಗಳಿಗೆ ಹೆಚ್ಚಿನ ಲಾಭಾಂಶ ದೊರೆಯುವದೆಂಬ ಒಂದು ಗುಂಪಿನವರು ಅದಕ್ಕೆ ಹೆಚ್ಚಿನ ಬೆಂಬಲ ಕೊಟ್ಟದ್ದರಿಂದ ಕಳೆದ ವಾರಾಂತ್ಯದಲ್ಲಿ ಪ್ರಾರಂಭವಾದ ಏರಿಕೆ ಟಾಟಾ ಡೆಫರ್ಡ ಪಾಲುಗಳನ್ನು ೩೨೮೫-೦-೦ ರ ವರೆಗೆ ಎಳೆದೊಯ್ದಿತು. ಆದರೆ ಇಂದು ಅದು ೩೨೧೮-೧೨-೦ ಕ್ಕೆ ಹಿನ್ನಡೆಯಿತು. ಡಾಯಿಂಗ ಪಾಲುಗಳೂ ತಕ್ಕಮಟ್ಟಿನ ಏರಿಕೆ ತೋರಿ ೨೬೧೫-೦-೧ ಕ್ಕೇರಿ ೨೬೧೧-೪-೦ ಕ್ಕಿಳಿದವು. ಜವಳಿ ಪಾಲುಗಳಿಗೆ ಏರುತಿರುವ ಉತ್ಪಾದನವೆಚ್ಚದ ಭಯದಿಂದ ಬೆಂಬಲ ಕಡಿಮೆಯಾದರೂ ಟಾಟಾ ಪಾಲುಗಳೊಡನೆ ಅವು ಒಂದು ನಿಟ್ಟಿನಲ್ಲಿ ಏರಿಕೆ ತೋರಿಸಿದವು, ಹೀಗೆ ಕೋಹಿನೂರು ಈ ವಾರಾದಿಯಲ್ಲಿ ೯೬೧-೦-೦ ಕ್ಕೆ ಮುಟ್ಟಿದ್ದರೂ ಕೊನೆಗೆ ೯೪೩-೦-೦ ಕ್ಕೆ ಕಳೆದ ವಾರದಿಂದ ಕೆಳಮಟ್ಟಕ್ಕೆ ಇಳಿಯಿತು ಸ್ವದೇಶಿ ೮೬೨-೦-೦ ಕ್ಕೇರಿ ೮೯೭-೦-೦ ಕ್ಕೆ ಗೋಕಾಕ ೩೯೬-೦-೦ ರಿಂದ ೩೯೫-೦-೦ ಕ್ಕೆ ಸೆಂಚೂರಿ ೧೧೦೧-೪-೦ ರಿಂದ ೧೧೦೭-೦-೦ ಕ್ಕೆ ಸೆಂಟ್ರಲ್ ಇಂಡಿಯಾ ೪೭೮-೦.೦ ರಲ್ಲಿ ಯಥಾಸ್ಥಿತಿ ಇದ್ದರೆ, ಬೇಲಾಪುರ ಸಕ್ಕರೆ ೩೪೪-೩-೦ ರಿಂದ ೩೩೬-೦-೦ ಕ್ಕಿಳಿಯಿತು. ಸಿಂಧ್ಯಸ್ಟೀಮ ೫೯-೦-೦ ರಿಂದ ೬೮-೮-೦ ಕ್ಕೇರಿತು. ಇಂಪೀರಿಯಲ್ ಬ್ಯಾಂಕ ಎಫ್. ಸಿ. ಗೆ ಬೆಂಬಲ ದೊರೆತು ೩೦೮೦—೦....೦ ರಿಂದ ೩೧೪೦-೦-೦ ಕ್ಕೇರಿದೆ. ಸೆಂಟ್ರಲ ಬ್ಯಾಂಕ ೧೪೫-೦-೦ ರಿಂದ ೧೪೪-೦-೦ ಕ್ಕಿಳಿಯಿತು. ರಿಜರ್ವ ಬ್ಯಾಂಕ ೧೭೦-೦-೦ ರಿಂದ ೧೭೫-೦-೦ ಕ್ಕೇರಿದೆ.

ಸರಕಾರಿ ಸಾಲಪತ್ರಗಳು ಸಿದ್ಧವಾಗಿ ಮುಂದರಿದು ಜಿ. ಪಿ. ನೋಟು ೧೦೪-೧೨-೦ ಕ್ಕೇರಿದೆ. ೩॥% ೧೯೪೭-೫೦ ಸಾಲ ೧೦೨-೧೨-೦.

### ಚಿನ್ನ-ಬೆಳ್ಳಿ

ಚಿನಿವಾರ ಕಟ್ಟೆಯಲ್ಲಿ ಬೆಲೆಗಳು ಕಳೆದ ವಾರಾಂತ್ಯದಲ್ಲಿ ಸುಧಾರಣೆ ತೋರಿದರೂ ಇಂದು ಇಳಿದು ಹೋದವು. ತಯಾರಿ ಚಿನ್ನ ೧೦೫-೧೨-೦ ರ ವರೆಗೆ ಹೋಗಿದ್ದು ಇಂದು ೧೦೪-೪-೦ ಕ್ಕಿಳಿದಿದೆ. ತಯಾರಿ ಬೆಳ್ಳಿ ೧೭೬-೦-೦ ಕ್ಕೇರಿ ೧೭೦-೪-೦ ಕ್ಕಿಳಿಯಿತು.

### ಅರಳೆ

ಕಳೆದ ವಾರಾಂತ್ಯದಲ್ಲಿ ೪೪೭-೦-೦ ಕ್ಕಿಳಿದಿದ್ದ ಜುಲೈ ವಾಯಿದೆ ಅರಳೆ ಈ ವಾರ ಸುಧಾರಿಸುತ್ತ ಹೋಗಿ ೪೫೧-೧೨-೦ ಕ್ಕೇರಿತು. ಸಪ್ಟಂಬರ ೪೬೪-೮-೦. ಏರಿಳಿತಗಳು ಬಹಳ ವಿಸ್ತಾರವಾಗಿರದೆ ಇಕ್ಕಟ್ಟಿನಲ್ಲಿ ಬೆಲೆಗಳು ಚಲಿಸುತ್ತಿವೆ.

### ಎಣ್ಣೆ ಕಾಳು

| | |
|---|---|
| ಶೇಂಗಾ | ೧೨೬—೪—೦ |
| ಅಗಸಿ | ೨೫—೧೨—೦ |
| ಅಗಸಿ ಎಣ್ಣೆ | ೧೭—೧೦—೦ |

## ಶಿವಮೊಗ್ಗೆ

### ಅಡಿಕೆ ಪೇಟೆ

| | | | | | |
|---|---|---|---|---|---|
| ದೇಶಾವರ ನಂ. ೧ | ಮಣ ೧ ಕ್ಕೆ | ೨೩ | ರಿಂದ | ೨೬ |
| ,, ,, ೨ | | ೨೨ | ,, | ೨೫ |
| ,, ,, ೩ | ,, | ೨೨ | ,, | ೨೪ |
| ರಾಜಾ ಅಲವು | ,, | ೨೪ | ,, | ೨೫ |
| ಬೆಟ್ಟೆ | ,, | ೧೪ | ,, | ೧೬ |
| ವಂತಿ | ,, | ೧೫ | ,, | ೧೭ |

ಪೇಟೆಯಲ್ಲಿ ಅಡಿಕೆಗೆ ಒಳ್ಳೆ ಬೇಡಿಕೆ ಇದೆ. ಬೆಟ್ಟೆಯಲ್ಲಿ ಏರಿಕೆ ಇದೆ.

### ಸಾಂಗಲಿ ಪೇಟೆ

| | |
|---|---|
| ಬೆಲ್ಲ ಬಂಗಾಲಿ ಮಣ ರೂ. | ೧೪—೧೬ |
| ಅರಿಸಿಣ ಹೇರು ,, | ೮೦—೯೦ |
| ಮೆಣಸಿನಕಾಯಿ ಹೇರು ,, | ೧೮೦—೨೦೦ |
| ದೇಶಿ ತಂಬಾಕು ಹೇರು | ೧೦೦-೨೦೦ |
| ಪಂಢರಪುರಿ ,, | ೨೦೦—೨೭೫ |
| ತಂಬಾಕು ಅಕೋಳ (ಹೇರು) | ೨೫೦—೩೭೫ |

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೨೯೦-೨೯೫ |
| ,, | ನಂ. ೨ | ೨೮೦-೨೮೫ |
| ,, | ನಂ. ೩ | ೨೭೫-೨೮೦ |
| ಜಿನ | | ೨೦೦-೨೧೫ |
| ಸಾಜಿನ | | ೨೧೦-೨೧೨ |
| ಡಬಲರೋಲರ | | ೨೦೫-೨೧೫ |

★ ಚಿಕ್ಕ ಕತೆ

# ★ ಬೆಂದ ಬಗೆ

(ಬರೆಹಗಾರರು : ಶ್ರೀರಾಮ ಪಾಟೀಲ, ವಿಜಯಪುರ)

ಮಹನೀಯರೇ,

ನಾನೊಬ್ಬ ಅಪರಾಧಿಯಿದ್ದೇನೆ. ಆ ತಿಳುವಳಿಕೆಯಿಂದಲೇ ನಾನಿದನ್ನು ಪ್ರಾಂಜಲ ಮನಸ್ಸಿನಿಂದ ಬರೆಯುತ್ತಲಿದ್ದೇನೆ. ಈ ಅಪರಾಧಕ್ಕೆ ನನಗೆ ಶಿಕ್ಷೆಯಾಗಬೇಕಾಗಿತ್ತು. ಅದೇನು ಕಾರಣದಿಂದ ಉಳಿದುಕೊಂಡೆನೋ ನಾನರಿಯೆ. ನನ್ನ ಅಪರಾಧ ಜನರಿಗೆ ಇದುವರೆಗೆ ತಿಳಿದುಬಂದಿಲ್ಲ. ಅದಕ್ಕೇ ನನಗೆ ಶಿಕ್ಷೆಯಾಗಿರಲಿಕ್ಕಿಲ್ಲವೆಂದು ಎನಿಸುತ್ತದೆ. ಮತ್ತು ನಾನು ಹೀಗೆ ಬರೆದು ನಿಮ್ಮೆಲ್ಲರಿಗೆ ತಿಳುಹದಿದ್ದರೆ ಈ ನನ್ನ ಅಪರಾಧವೂ ಕಾಳನ ಅಂಧಕಾರಮಯ ಪರದೆಯ ಹಿಂದೆ ಅಡಗಬಹುದಾಗುತ್ತಿತ್ತು. ಅಲ್ಲದೆ ನಾನು ಮಾಡಿದ ಈ ಅಪರಾಧಕ್ಕೆ ದೇವರು ಕೂಡ ಸಾಕ್ಷಿಯಾಗಿದ್ದಾನೆ. ಆತನು ಕೂಡ ನನಗೆ ಶಿಕ್ಷೆ ವಿಧಿಸದೆ ಇದ್ದುದಕ್ಕಾಗಿ ಹೇಳಿಕೇಳಿ ನನಗೆ ಆಶ್ಚರ್ಯವಾಗುತ್ತದೆ! ಕಲಿಯುಗದಲ್ಲಿ ದುರ್ಜನರಿಗೆ ತಕ್ಕ ಶಿಕ್ಷೆಯಾಗುವದಿಲ್ಲ ಎನ್ನುವ ಮಾತು ನನ್ನ ಉದಾಹರಣೆಯಿಂದಲೇ ಹುಟ್ಟಿರಬಹುದು.

ಮೊದಮೊದಲು ಈ ಅಪರಾಧದ ಬಗ್ಗೆ ನನಗೆ ಹೆದರಿಕೆಯಾಗಹತ್ತಿತು. ಎರಡು ಮೂರು ಸಲ "ನಾನು ಕಳ್ಳನಲ್ಲ" ಎಂದು ಕನವರಿಸಿ ಎದ್ದೆನೆಂದು ನನ್ನ ಹೆಂಡತಿ ಪ್ರಮೀಲೆ ನನಗೆ ಹೇಳಿದ್ದಾಳೆ. ಒಂದು ಸಲವಂತೂ ನನಗೆ ತೀರ ಹೆದರಿಕೆಯಾಗಿ ಪೋಲೀಸರೇ ನನ್ನನ್ನು ಹಿಡಿಯಲು ಬಂದರೆಂದು ಹಿತ್ತಲ ಬಾಗಿಲಿನಿಂದ ನನ್ನ ಒಬ್ಬ ಮಿತ್ರನ ಮನೆಗೆ ಓಡಿ ಅಲ್ಲಿ ತಾಸುಗಟ್ಟಲೆ ನಡುಗುವ ಎದೆಯಿಂದ ದುಃಖ ಮತ್ತು ಅಳಲುಗಳೆರಡರ ಮಧ್ಯದಲ್ಲಿದ್ದು, ಒರಗಿ, ತಲೆಯಲ್ಲಿ ತಾಕಲಾಡುವ ಸಾವಿರ ವಿಚಾರ ತರಂಗಗಳಿಂದ ನಿದ್ದೆಯಿಲ್ಲದೆ ಹೆದರಿ ಹೆದರಿ ಕಾಲ ಕಳೆದಿದ್ದೇನೆ.

ಒಂದು ಸಲವಂತೂ ಈ ಬಗೆಯ ಕಡಿತ ಅಸಹ್ಯನಾಗಿ ತಾಳಲಾರದೆ ಆತ್ಮಹತ್ಯ ಮಾಡಿಕೊಳ್ಳುವ ಪ್ರಯತ್ನದಲ್ಲಿದ್ದೆನು. ಆದರೆ ಅದಕ್ಕೇಕೊ ನನ್ನ ಮನ ಹಿಂಜರಿಯಿತು, ಹೆದರಿಕೆಯಿಂದಲ್ಲ, ಆದರೆ ಆಗ ಆತ್ಮಹತ್ಯವು ನನ್ನ ಅಪರಾಧಕ್ಕೆ ತಕ್ಕ ಶಿಕ್ಷೆಯಲ್ಲವೆಂದು ನಾನು ನಿಶ್ಚಯವಾಗಿ ತಿಳಿದುಕೊಂಡಿದ್ದೆ. ಈಗಲೂ ತಿಳಿದಿದ್ದೇನೆ. ಇದು ಮುಖ್ಯ ಕಾರಣ. ಆದರೆ ನನ್ನವಳಾದ ಪ್ರಮೀಲೆಯನ್ನು ಬಿಟ್ಟು ಹೋಗುವದು ನನಗಾಗಲಿಲ್ಲವೆಂಬಮಾತೂ ಒಂದು ಪೂರಕ ಕಾರಣವೆಂದು ಹೇಳಬಯಸುವೆ.

ನನಗೀಗ ಶಿಕ್ಷೆ ಬೇಕಾಗಿದೆ. ಜನವು ಮರೆತು ನನ್ನನ್ನು ಶಿಕ್ಷಿಸಲಿಲ್ಲವೆಂಬುದೇನೋ ನಿಜ ಮತ್ತು ನಾನು ನನ್ನ ಅಪರಾಧ ಒಪ್ಪಿ ನನಗೆ ಶಿಕ್ಷೆ ಕೊಡಿರಿ ಅಂತ ಈಗ್ಗೆ ಕೇಳಿದರೆ ಜನರು ನಕ್ಕುಬಿಡುತ್ತಾರೆಂದು ನನಗೆ ತಿಳಿದ ಮಾತಾಗಿದೆ. ಆದರೂ ಈ ನನ್ನ ಹೇಳಿಕೆಯಿಂದ ಕೆಲವು ಜನರ ಮನಕರಗಿ ನನ್ನನ್ನು ಶಪಿಸುತ್ತಿದ್ದರೆ ಅದೇ ನನಗೆ ಹಿತ, ಅದನ್ನೇ ನಾನು ನನ್ನ ಶಿಕ್ಷೆಯೆಂದು ತಿಳಿದುಕೊಳ್ಳುತ್ತೇನೆ. ನನ್ನ ಬೆಂದ ಬಗೆ ಮಾದು ಹಗುರಾಗುತ್ತದೆ. ನಾನು ಹೇಳಿದುದು ಸಾರ್ಥಕವಾಗುತ್ತದೆ.

ನಾನೇನೂ ಅಷ್ಟು ದೊಡ್ಡ ಸಾವಕಾರನಲ್ಲ. ಆದರೆ ಮದುವೆಯಾಗುವದಕ್ಕಿಂತ ಮೊದಲು ತುಸು ದುಡ್ಡು ನನ್ನ ಹತ್ತರ ಇದ್ದಿತು. ಮದುವೆಯಾಗುವ ಹೊತ್ತಿಗೆ ಅದು ಸಂಪುಷ್ಟಕ್ಕೆ ಬಂದಿತು ಅದು ನನ್ನ ಹತ್ತರ ದುಡ್ಡು ಇದೆಯೆಂಬ ಭಾವನೆಯಿಂದ ಪ್ರಮೀಲೆಯ ತಂದೆಯು ಆಕೆಯನ್ನು ನನಗೆ ಧಾರೆಯೆರೆದು ಕೊಟ್ಟರು. ನಾನು ನಿಮ್ಮನ್ನು ದುಡ್ಡಿಗಾಗಿ ಅಲ್ಲ ಮದುವೆಯಾದದ್ದು, ಆದರೆ ನಿಮ್ಮಲ್ಲಿರುವ ಅಪಾರ ಪ್ರೇಮಕ್ಕೆ ಎಂದು ಆಕೆ ನನಗೆ ಹೇಳುತ್ತಾಳೆ. ಇದೆಷ್ಟು ನಿಜವೋ ನನಗೆ ಗೊತ್ತಿಲ್ಲ. ಒಂದೊಂದು ವೇಳೆ ನಿಜವೂ ಇರಬೇಕೆಂದು ಭಾವನೆಯಾಗುತ್ತದೆ, ಯಾಕಂದರೆ ಒಂದು ದಿನ ಕೂಡ ಆಕೆ ನಮ್ಮ ಬಡತನದ ವಿಷಯಕ್ಕೆ ನೊಂದು ಬಿರುನುಡಿ ಆಡಲಿಲ್ಲ. ಒಂದು ದಿನ ಕೂಡ ತಂದೆಯ ಮನೆಗೆ ಹೋಗಲಿಲ್ಲ. ಸಿಕ್ಕುವ ಒಪ್ಪತ್ತಿನ ರೊಟ್ಟಿಯಲ್ಲಿ ತೃಪ್ತಿಹೊಂದಿ ನನ್ನನ್ನು ಆನಂದಪಡಿಸಿದ್ದಾಳೆ. ಇದು ಪ್ರೇಮವೇ ಆಗಿದ್ದರೆ ಅದನ್ನು ಕೊನೆವರೆಗೆ ಉಳಿಸು ಎಂದು ದೇವರನ್ನು ನಾನು ಆಗಾಗ್ಗೆ ನೆನಿಸುತ್ತಿದ್ದೇನೆ. ಒಟ್ಟು ನನ್ನ ಪ್ರಮೀಲೆ ನನಗೆ ಉಳಿದರೆ ಸಾಕು.

ಒಂದು ದಿನ ಈ ಒಪ್ಪೊತ್ತಿನ ಕೂಳಿಗೆ ಕೂಡ ಚಕ್ರ ಬಂದಿತು.

ಸಂಜೆಯಾಗುತ್ತ ಬಂದಿತ್ತು. ಹೊಟ್ಟೆಯಲ್ಲಿ ಕಾಗೆಗಳು ಕರೆಯುತ್ತಿದ್ದವು. ಹೊರ ಜನ ನಲಿದಾಡುತ್ತಿದ್ದರೂ ನಾನು ಮಾತ್ರ ನನ್ನ ಹೆಂಡತಿಯೊಡನೆ ಉಪವಾಸವಿದ್ದೆನು. ಅಷ್ಟರಲ್ಲಿ, "ರಾಮರಾಯರೇ" ಎಂದು ಹೊರಗೆ ಯಾರೋ ಒದರಿದರು.

ಯಾರಾದರೂ ಅಲಂಪಿಗೆ ಕರೆದಿರಬಹುದೆಂದು ನನಗನ್ನಿಸಿತು. ಅಹುದು. ಸಂಜೆಯ ವರೆಗೆ ಕೆಲಸ ಮಾಡಿದವರು ಈಗ್ಗೆ ಬೇಸರ ಕಳೆದುಕೊಳ್ಳಲು ಅಲಂಪಿಗೆ ನಡೆದಿರಬಹುದು. ಆದರೆ ನನಗೇಕೋ ಅಲಂಪು! ನನಗೆ ಪ್ರತ್ಯೇಕವಾಗಿ ಅಲಂಪಿಗಾಗಿ ಹೋಗುವ ಅವಶ್ಯಕತೆಯೇ ಇರಲಿಲ್ಲ. ಅದಕ್ಕೇ ನಾನು ಹೊರಗೆ ಹೋಗಬಾರದೆಂದು ನಿರ್ಧರಿಸಿದ್ದೆನು. ಆದರೆ ಆಗ ನಾನು ಕೇಳಿದ ಧ್ವನಿಯಲ್ಲಿ ಯಾವದೋ ಒಂದು ತರದ ಕಷ್ಟ ಒಡಮೂಡಿತ್ತು ಅದಾವುದೋ ಒಂದು ಅವಸರದ ಕೆಲಸದ ಸಲುವಾಗಿ ಆ ಧ್ವನಿಯು ನನ್ನನ್ನು ಕರೆಯುವಂತೆ ತೋರಿತು. ಅದಕ್ಕೆ ನನ್ನ ಮನಸು ವ್ಯಗ್ರವಾಗಿದ್ದರೂ ಹೊರಕ್ಕೆ ಹೋಗಿ ನೋಡಿದೆನು—ಅರವಿಂದ !

ಮುಖವೆಲ್ಲ ಮುದುಡಿಹೋಗಿತ್ತು. ಅತ್ತು ಅತ್ತು ಕಣ್ಣುಗಳು ಕೆಂಡವಾಗಿದ್ದವು. ತಲೆಯ ಮೇಲಿನ ಕೂದಲು ಬಿಚ್ಚಿಹೋಗಿ ಬೇಕಾದತ ಹಾರಾಡುತ್ತಿದ್ದವು. ಒಂದು ಅಂಗಿ ತೊಟ್ಟು ಮೇಲೆ ಒಂದು ಧೋತರ ಹೊತ್ತಿದ್ದ, ಮಸಣಕ್ಕೆ ಹೋಗುವವರ ಹಾಗೆ........ ಅಯ್ಯೋ ಎಂಥ ವಿಚಾರ! ಹಾಗಾಗಬಾರದು ದೇವಾ ಎಂದು ನಾನು ದೇವರನ್ನು ಅನನ್ಯಭಾವದಿಂದ ಪ್ರಾರ್ಥಿಸಿದೆನು. ಅರವಿಂದನು ತೇಕುತ್ತ ಅಸ್ಪಷ್ಟವಾಗಿ ನನ್ನನ್ನು ಕರೆದನು. "ರಾಮಾ!" ಎಂದು.

"ಯಾಕೆ?" ನಾನಂದೆನು.

"ರಾಮು, ನನ್ನ ಗಾಯಿತ್ರಿ ಹೋದಳು. ನಡೆ"

ನನ್ನ ಹೊಟ್ಟೆಯಲ್ಲಿ ತಣ್ಣೀರು ಕಲಿಸಿ ಅಲುಗಾಡಿಸಿದಂತಾಯಿತು.

ಅರವಿಂದನು ನನ್ನ ಗೆಳೆಯ. ಜಗತ್ತೆಲ್ಲ ಅಳಿದುಹೋಗಲಿ, ಆದರೆ ಅರವಿಂದನು ಮಾತ್ರ ಉಳಿಯಲಿ ಎಂದು ಎಷ್ಟೋ ಸಾರೆ ಬಗೆದಿದ್ದೇನೆ. ಅರವಿಂದನೊಬ್ಬ ಅಪರೂಪ ವ್ಯಕ್ತಿ. ಅಥವಾ ಅಪರೂಪ ಗೆಳೆಯ. ಅವನ ಮನೆತನದ ಸ್ಥಿತಿಯು ಚನ್ನಾಗಿತ್ತು. ಆದರೆ ಅದೇನು ದೈವೀಕಾಟವೋ ತಿಳಿಯದು. ಅವನಿಗೆ ಹುಟ್ಟಿದ ಕೂಸುಗಳೆಲ್ಲ ಮೃತವಾಗುತ್ತಿದ್ದವು. ಇದು ಐದನೇದ್ದು. ಅದ್ದರಿಂದ ಅವನಿಗೆ ಆದ ಅಳಲನ್ನು ಇಲ್ಲಿ ಬರೆಯಲು ಸಾಧ್ಯವಿಲ್ಲ. ಅದನ್ನು ತಿಳಿದೇ ನೋಡಬೇಕು.

ನಾನು ಹೆಚ್ಚು ಮಾತಾಡಲಿಲ್ಲ. ಅರವಿಂದನ ಮನೆಗೆ ನಡೆದೆನು. ಒಳಕ್ಕೆ ಹೋಗಲು ದಾರಿ ಇದ್ದಿದ್ದಿಲ್ಲ; ಅಷ್ಟು ಜನದಟ್ಟಣೆ. ಅದರಲ್ಲಿಯೂ ಆ ಹುಡುಗೆ ಎಲ್ಲರಿಗೂ ನಚ್ಚಿನವಳಾಗಿದ್ದಳು. ಅಥವಾ ಎಲ್ಲರಿಗೆ ಬೇಕಾಗುವಂತೆ ಒಂದು ವಾತಾವರಣವನ್ನು ಕಲ್ಪಿಸಿಕೊಂಡಿದ್ದಳು. ಆದರೆ ಅಲ್ಲಿ ಹಾಗೆ ನೋಡುತ್ತ ನಿಲ್ಲಲು ಸಾಧ್ಯವಿದ್ದಿಲ್ಲ. ಹುಡುಗದನವು ಬೇಲಿಯಲ್ಲಿ ನುಗ್ಗಿ ಹೊಲ ಹಾಳುಮಾಡುವಂತೆ ನಾನು ದಾರೀಮಾಡುತ್ತ ಹೆಣದ ಸಮೀಪ ನಡೆದೆನು. ಅರವಿಂದನ ಹೆಂಡತಿಗೆ ನಾನು ಯಮನ ದೂತನಂತೆಯೇ ಕಂಡಿರಬೇಕು. "ಅಯ್ಯೋ ಬಂದರು" ಎಂದು ಹೇಳಿ ಆಕೆಯು ಮೂರ್ಛೆ ಹೋದಳು.

"ಗಾಯಿತ್ರಿಯ ಋಣ ತೀರಿತು ಇನ್ನು" ಎಂದು ಅನ್ನುತ್ತ ನಾನು ಹೆಣವನ್ನು ಅವಳ ತೊಡೆಯ ಮೇಲಿಂದ ನನ್ನ ಕೈಯಲ್ಲಿ ತೆಗೆದುಕೊಂಡೆನು. ಅಳುವ ಧ್ವನಿಯು ಶಿಖರಕ್ಕೆ ಮುಟ್ಟಿ ನನ್ನ ಕಿವಿಗಳು ಗಡಚಿಕ್ಕಿದವು. ನಾನು ಏನು ಮಾಡುತ್ತಿದ್ದೇನೆ ಎಂಬುದರ ಅರಿವೇ ನನಗೆ ಉಳಿಯಲಿಲ್ಲ. ಕಾಲುಗಳು ಮಾತ್ರ ತಮ್ಮ ಕೆಲಸವನ್ನು ವ್ಯವಸ್ಥಿತವಾಗಿ ಮಾಡಿದ್ದವು.

ಆಗಲೇ ಮಳೆಯಾಗಿತ್ತು. ತಣ್ಣನೆಯ ತೋಯ್ದ ಗಾಳಿಯು ಮೈಗೆ ಉಗ್ಗಿ ನನಗೆ ತಿಳುವಳಿಕೆಯುಂಟಾಗಿ ನನ್ನ ತಲೆಯಲ್ಲಿ ಮೆದುಳಿದ್ದುದನ್ನು ನೆನಹಿಗೆ ತಂದುಕೊಟ್ಟಿತು. ಆ ಹೆಣವನ್ನು ತೆಗೆದುಕೊಂಡು ಒತ್ತರದಿಂದ ಮುಂದೆ ಸಾಗಿದೆನು. ಅರವಿಂದನೂ ಹಿಂದಿನಿಂದಲೇ ಎರಡು ಕೊಡೆಗಳನ್ನು ತೆಗೆದುಕೊಂಡು ನನ್ನ ಬೆನ್ನುಹತ್ತಿದನು.

ದಾರಿಯಲ್ಲಿ ಆವಾವ ಮಾತುಕತೆಗಳಾದವೋ ತಿಳಿದಿಲ್ಲ. ಅಥವಾ ಮಾತನಾಡದೆಯೇ ನಾವು ಅಲ್ಲಿ ಹೋಗಿದ್ದರೂ ಹೋಗಿರಬಹುದು. ನಾನು ನೇರವಾಗಿ ಮಸಣಕ್ಕೆ ನಡೆದು ಅಲ್ಲಿಯೇ ಸಿದ್ಧವಾದ ಒಂದು ತಗ್ಗಿಗೆ ಸಾಗಿದೆನು. ಗಾಯಿತ್ರಿ ಸಾಯುತ್ತಿದ್ದಳೆಂದು ಈ ಜನರಿಗೆ ಮೊದಲೇ ತಿಳಿದಿತ್ತೋ ಏನೋ! ಅದಕ್ಕೆ ಅವರು ಅಳತೆಗೆ ಸರಿಯಾಗಿ ತಗ್ಗು ತೋಡಿ ನಾವು ಆ ಸ್ಥಳ ಮುಟ್ಟಿದ ಕೂಡಲೇ ಸಲಿಕೆಯನ್ನೆತ್ತಿಕೊಂಡು ನಗುತ್ತ ನಮ್ಮನ್ನು ಸ್ವಾಗತಿಸಿದರು.

ನಾನು ಹೆಣವನ್ನು ತಗ್ಗಿನ ಬದಿಯಲ್ಲಿಟ್ಟು ಅದರ ಮೈಮೇಲಿನ ಎಲ್ಲ ಅರಿವೆಗಳನ್ನು ಉಚ್ಚಿದೆನು. ಕಿವಿಯಲ್ಲಿ ಎರಡು ಚೌಕಳಿಗಳಿದ್ದವು. ಅವನ್ನು ತೆಗೆದು ಅರವಿಂದನಿಗೆ ಕೊಡಹೋದೆ. ಅವನು, ಟೊಂಕದಲ್ಲಿ ಸಿಲುಕಿಸು ಮನೆಗೆ ಹೋದ ಮೇಲೆ ಕೊಡುವಿಯಂತೆ ಎಂದು ಅಂದನು. ನಾನು ಟೊಂಕದಲ್ಲಿ ಸಿಲುಕಿಸಿಕೊಂಡೆ. ಆ ಮೇಲೆ ಆ ಬೆತ್ತಲೆಯಾದ, ಶರೀರವನ್ನು ಕೈಯಲ್ಲಿ ತೆಗೆದುಕೊಂಡು ತಗ್ಗಿನಲ್ಲಿಳಿದೆ. ಕೆಳಕ್ಕಿಡುವದಕ್ಕಿಂತಲೂ ಮೊದಲು ಅದನ್ನು ನೋಡಿದೆನು. ನೆಟ್ಟ ದಿಟ್ಟಿ, ತೆರೆದ ಬಾಯಿ, ಹಾರುತ್ತಿರುವ ಗುಂಗುರುಕೂದಲು, ಬಂಗಾರದ ಮೈ, ಶಕ್ತಿಯಿಲ್ಲದೆ ತಿರುಗಿಸಿದತ್ತ ತಿರುಗುವ ಆ ಶರೀರವನ್ನು ನೋಡಿ ನನಗೆ ಆಶ್ಚರ್ಯವಾಯಿತು. ನಾನು ಒಂದು ಹನಿ ಕಣ್ಣೀರು ಮಿಡಿದೆನು.

"ಹಾಗೆ ಅಳಬೇಡಿ ಎಂದನು ಮಸಣಿಗನು.

ಅವನ ಮಾತಿನಿಂದ ನಾನು ಎಚ್ಚರವಾದೆನು. ಆ ಶರೀರವನ್ನು ಹಾಗೇ ಕೆಳಗಿಟ್ಟು ಮೇಲೆ ಬಂದು ಸಲಿಕೆಯಿಂದ ಮಣ್ಣು ಎಳೆದನು.

ನಿಷ್ಕರುಣವಾದ ತಗ್ಗಿನ ಬದಿಗೆ ನಿಂತ ಅರವಿಂದನು ಧಾರಾಳವಾಗಿ ಅಳುತ್ತಿದ್ದನು. ಅವನ ಅಳಲನ್ನು ನಾನು ತಡೆಯಲಿಲ್ಲ. ಅದು ನನ್ನ ಅಳಲನ್ನು ಹೆಚ್ಚಿಸಿತು. ಅದಕ್ಕೆ, ಮನುಷ್ಯಮಾಂಸವನ್ನು ಹೀರಿಕೊಂಡು ಕೊಬ್ಬಿದ ಮರಗಳ ತೋಪಿನ ಕಡೆಗೆ ಅವನನ್ನು ಕರೆದುಕೊಂಡು ಹೋಗಿ ಅಲ್ಲಿ ನನ್ನ ಎದುರು ಕೂಡಿಸಿಕೊಂಡೆನು. ಆಮೇಲೆ ಇಬ್ಬರೂ ಮನದಣೀ ಅತ್ತೆವು. ಅಳಲೆಲ್ಲ ಧಾರೆಯಾಗಿ ಹರಿಯಿತು. ಕಣ್ಣು ತಿಳಿಯಾಯಿತು, ಅದರ ಜೊತೆಗೆ ಮನವೂ ತಿಳಿದಾಗಿರಬೇಕು. ಯಾಕಂದರೆ ಮುಂದೆ ಮಾತ್ರ ನನಗೆ ಅಳಲೇ ಬರಲಿಲ್ಲ. ಅದಕ್ಕೆ ಅರವಿಂದನನ್ನು ಮನೆಗೆ ಕಳುಹಿ ನಾನು ನನ್ನ ಮನೆಗೆ ಬಂದೆನು. ಆ ದಿನ ಊಟವಿಲ್ಲದ್ದರಿಂದ ಜಳಕ ಮಾಡಿ ಮಲಗಿಕೊಂಡೆನು.

ಆ ದಿನ ರಾತ್ರಿ ನನಗೆ ನಿದ್ದೆ ಹತ್ತಲಿಲ್ಲ. ಅತಿ ಪ್ರಯಾಸದಿಂದಲೂ ಮರುದಿನದ ಹೊಟ್ಟೆಯ ವಿಚಾರದಿಂದಲೂ ತಲೆಯು ಜಡವಾಗಿತ್ತು. ಹೊಟ್ಟೆಯನ್ನು ಸಾಗಿಸುವ ವಿಚಾರ ಬಂದಕೂಡಲೆ ನನ್ನ ಕಣ್ಣುಗಳಿಗೆ ಕತ್ತಲೆ ಕಟ್ಟಿದಂತಾಗಿ ನಾನು ಅದಾವುದೋ ಒಂದು ಹೊಸ ದೇಶದಲ್ಲಿ ತೇಲುತ್ತಿದ್ದಂತೆ ಭಾಸವಾಯಿತು- ಆದರೆ ಅದು ಭಾಸವೇ! ಎಚ್ಚರವಾದ ಕೂಡಲೆ ನನಗೆ ನನ್ನ ನಿಜ ಪರಿಸ್ಥಿತಿ ತಿಳಿದು ವ್ಯಸನವಾಯಿತು. ಈ ಭಾಸವನ್ನು ಹೆಚ್ಚು ಕಾಲ ಉಳಿಸಿಕೊಳ್ಳಲಿಕ್ಕೆಯೋ ಏನೋ ಜನರು ಸೆರೆ ಸಿಂದಿ ಕುಡಿಯುತ್ತಿರಬಹುದು. ನಾನು ಅತ್ತಿಂದ ಇತ್ತ, ಇತ್ತಿಂದ ಅತ್ತ ಹೊರಳಾಡುತ್ತಿರುವಾಗ ಒಂದು ಸಲ ಟೊಂಕಕ್ಕೆ ಏನೋ ಕಚ್ಚನೆ ಕಡಿದಂತಾಯಿತು. ಕಡಿದ ಸ್ಥಳವನ್ನು ಬೆರಳಿನಿಂದ ಅಡಿಸಿ ನೋಡುತ್ತೇನೆ! ಗಾಯಿತ್ರಿಯ ಕಿವಿಯೊಳಗಿ ಚೌಕುಳಿಗಳು !! ಗಾಯಿತ್ರಿಯ ಹೆಸರು ನೆನಪಾದ ಕೂಡಲೆ ನನಗೆ ಹೆದರಿಕೆಯಾಯಿತು. ಆ ಮಸಣ ! ಅಲ್ಲಿ ಗಾಯಿತ್ರಿಯ ಬೆತ್ತಲೆಯಾದ ಹಳದಿ ಹೆಣ ! ಅವಳ ನೆಟ್ಟದಿಟ್ಟಿ, ನನ್ನ ಹೃದಯದಲ್ಲಿ ಕಂಪನವನ್ನು ಹುಟ್ಟಿಸಿ ನನ್ನನ್ನು ನಡುನೆತ್ತಿಯ ವರೆಗೆ ಅಂಜಿಸಿದವು.

ನಾನು "ಅಮ್ಮೋ" ಎಂದು ಚೀರಿದೆನು. ನನ್ನ ಪ್ರಮೀಲೆಗೆ ಎಚ್ಚರವಾಯಿತು. ಪ್ರಶ್ನೆ ಕೇಳುವ ಹರವಾದ ಕಣ್ಣುಗಳಿಂದ ಅವಳು ನನ್ನನ್ನೇ ನೋಡಹತ್ತಿದಳು.

"ಪ್ರಮೀಲ ! ನನಗೆ ಅದೇಕೋ ಹೆದರಿಕೆಯಾಗಹತ್ತಿದೆ !!" ಎಂದೆನು ನಾನು.

ಗಂಡಸೇನೋ ಬಲಶಾಲಿಯಂತೆ. ಹೆಂಗಸಿಗಿಂತ ಧೈರ್ಯವಂತನಂತೆ. ಸ್ವತಃ ಗಂಡ ಕುಳಿತು ಮಧ್ಯರಾತ್ರಿಯಲ್ಲಿ ನನಗೆ ಹೆದರಿಕೆಯಾಗುತ್ತಿದೆ ಎಂದರೆ ಪಾಪ ! ಹೆಂಡತಿ ಏನು ಮಾಡಬೇಕು. ಪ್ರಮೀಲೆಗಂತೂ ತೀರ ಹೆದರಿಕೆಯಾಗಿರಬೇಕು. ಅದಕ್ಕೆ ಅವಳು ನನ್ನ ತೀರ ಹತ್ತರ ಸರಿದಳು. ನಾನು ಅವಳನ್ನು ಬಿಗಿಯಾಗಿ ಅಪ್ಪಿ ಮುತ್ತುಕೊಟ್ಟು, "ಏನಿಲ್ಲ ಪ್ರಮಿಲ ! ಮಲಕ್ಕೋ !!" ಎಂದೆನು.

ಅವಳಿಗೆ ಧೈರ್ಯ ಬಂದಿತು. ನಿದ್ದೆಗೆಟ್ಟ ಅವಳು ಮತ್ತೆ ನಿದ್ದೆಹೋದಳು. ಆದರೆ ನನಗೆ ಮಾತ್ರ ನಿದ್ದೆ ಹತ್ತಲಿಲ್ಲ. ಆ ಚೌಕುಳಿಗಳನ್ನು ಕೈಯಲ್ಲಿ ತೆಗೆದುಕೊಂಡು ದೀಪ ಹಚ್ಚಿ ನೋಡಿದೆ. ಹದಿನಾಲ್ಕು ಸುಂದರವಾದ ಮುತ್ತುಗಳಿದ್ದವು. ಎಂಟು ಹತ್ತು ರೂಪಾಯಿಯ ಬಂಗಾರವೂ ಇದ್ದಿತು. ಅಂತೂ ಅದರ ಬೆಲೆ ೩೦-೮೦ ರೂಪಾಯಿ ಆಗಬಹುದಾಗಿದ್ದಿತು. ನಾನು ನನ್ನ ಪರಿಸ್ಥಿತಿ ನೆನಿಸಿಗೊಂಡು ಅವನ್ನು ಎತ್ತಿ ಹಾಕಬೇಕೆಂದು ಮಾಡಿದೆ. ಒಂದು ನಿರ್ಧಾರ ಮಾಡಿಕೊಂಡು ದೀಪ ಆರಿಸಿ ಮಲಗಿದೆ.

ಇಲ್ಲಿಗೆ ನನ್ನ ಕತೆ ಮುಗಿಯಿತು. ಮುಂದೇನಾಯಿತೆಂದು ಹೇಳುವದು ಬೇಡ. ಆದರೂ ಆ ಚೌಕುಳಿಗಳನ್ನು ಮಾರಲು ಮೂವತ್ತು ರೂಪಾಯಿಗಳು ಬಂದವೆಂದೂ ಅದರಿಂದ ಒಂದು ತಿಂಗಳ ವರೆಗೆ ಹೊಟ್ಟೆಸಾಗಿಸುತ್ತಿರುವಲ್ಲಿ ನನಗೆ ಕೆಲಸ ಸಿಕ್ಕಿತೆಂದೂ ಈಗ ಸುಖವಾಗಿದ್ದೇನೆಂದೂ ಹೇಳಲೇಬೇಕೆಂದು ಎನ್ನಿಸುತ್ತಿದೆ.

ನಿಜವಾಗಿ ನೋಡಿದರೆ ನಾನು ಇಂದಿನ ವರೆಗೂ ಯಾವ ಅಪರಾಧಗಳನ್ನೂ ಮಾಡಿಲ್ಲ. ಆದರೆ ಹಾಗೆ ಮಾಡದ ಸಲುವಾಗಿಯೇ ನಾನು ಉಪವಾಸ ಬೀಳಬೇಕಾಯಿತೋ ತಿಳಿಯದು ಅಪರಾಧ ಮಾಡಲು ನನಗೆ ಹೊಟ್ಟೆತುಂಬ ಅನ್ನ ಸಿಕ್ಕಿತು.

ಈ ಅಪರಾಧ ಕೆಲವರಿಗೆ ಚಿಕ್ಕದು ಕಾಣಬಹುದು. ಆದರೆ ಅವರ ಈ ತಿಳುವಳಿಕೆ ಪೂರ್ತಿ ತಪ್ಪಿಹೋಗಿದೆಂದು ನಾನು ಸಪ್ರಮಾಣವಾಗಿ ಸಿದ್ಧಮಾಡಿಕೊಡಲು ಸಮರ್ಥನಿದ್ದೇನೆ. ನನ್ನ ಈ ತಪ್ಪಿಗೆ ಮೂರು ಬಲವಾದ ಕಾರಣಗಳು ಸಿದ್ಧವಿವೆ. ನಾನು ಮಾಡಿದುದು ಘನಘೋರ ಪಾಪವೆಂದು ಅವು ಸಾರಿ ಹೇಳುತ್ತವೆ.

ಮೊದಲನೇದೆಂದರೆ ಅರವಿಂದನು ನನ್ನ ಜೀವದ ಗೆಳೆಯ. ಬೇಡಿದ್ದರೆ ೩೦-೪೦ ರೂಪಾಯಿಗಳನ್ನು ಕೊಡಬಲ್ಲವನಾಗಿದ್ದ. ಹಾಗೂ ಮೇಲಿಂದ ಮೇಲೆ ಕೊಟ್ಟೂ ಇದ್ದಾನೆ. ಅಲ್ಲದೆ ಜಗತ್ತಿನಲ್ಲಿ ಉಳಿದವರಾರೂ ಇಲ್ಲದೆ ಇದ್ದರೂ ಚಿಂತೆಯಿಲ್ಲ ಅರವಿಂದನೊಬ್ಬನು ನನಗೆ ಸಾಕು ಎಂದು ನಾನು ಆರಂಭಕ್ಕೇ ಹೇಳಿದ್ದೇನೆ. ಇಂಥವನನ್ನು ಮೋಸ ಮಾಡಿ ಚೌಕುಳಿಗಳನ್ನು ಗಿಟ್ಟಿಸಿಕೊಳ್ಳುವದೆಂದರೇನು ! ಅಲ್ಲದೆ ಗಾಯತ್ರಿ ತೀರಿದ ಕೆಲ ದಿನಗಳ ಮೇಲೆ ಆತನು,

"ರಾಮಾ ಆ ಚೌಕುಳಿ ಏನಾದವು ?" ಎಂದು ಕೇಳಿದನು.

"ಯಾವ ಚೌಕುಳಿ ?" ನನ್ನ ಪ್ರಶ್ನೆ.

"ಗಾಯತ್ರಿಯ ಕಿವಿಯೊಳಗಿನವು ?" ಅವಳ ಹೆಸರು ಅವನು ಅಸ್ಪಷ್ಟವಾಗಿ ಉಚ್ಚರಿಸಿದನು.

"ಅರವಿಂದ ಅದರ ಕತೆ ಹೀಗಿದೆ." ನಾನು ಉತ್ತರಿಸಿದೆನು." ಚೌಕುಳಿಗಳನ್ನು ಕಿವಿಯಿಂದ ತೆಗೆದು ಅಲ್ಲಿಯೇ ನಿನಗೆ ಕೊಡಹೋದೆ. ನೀನು ತಕ್ಕೊಳ್ಳಲಿಲ್ಲ. ನಾನು ತಕ್ಕೊಂಡು ಟೊಂಕಕ್ಕೆ ಸಿಲುಕಿಸಿದೆ. ಆದರೆ ಮನೆಗೆ ಹೋಗಿ ಜಳಕ ಮಾಡಿ ಬೇರೆ ಧೋತರ ಉಡೋ ಕಾಲಕ್ಕೆ ನನ್ನ ಟೊಂಕದಲ್ಲಿ ಚೌಕುಳಿಗಳಿವೆಯೆಂದು ನನಗೆ ಗೊತ್ತೇ ಉಳಿಯಲಿಲ್ಲ. ಅಂದ ಮೇಲೆ ಪ್ರಮಿಲೆಗೆ ಗೊತ್ತಾಗುವ ಬಗೆ ಹೇಗೆ ? ಆಕೆ ಧೋತರವನ್ನು ಹಾಗೇ ಒಗೆದು ಒಣಹಾಕಿದಳು. ಮರುದಿನ ನನಗೆ ನೆನಪಾಗಿ ಒಗೆದ ಸ್ಥಳದಲ್ಲಿ ಕೆದರಿ ಕೆದರಿ ಹುಡುಕಿದರೂ ಸಿಕ್ಕಲಿಲ್ಲ." ಎಂದೆ.

(೧೬ ನೇ ಪುಟ ನೋಡಿರಿ)




ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ಜುಲೈ ತಾ. ೧ ರಿಂದ ೭ ರ ವರೆಗೆ

## ಮೇಷ

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮ. ಮಕ್ಕಳಲ್ಲಿ ಬಹಳ ಜನರ ಉನ್ನತಿ ಆದರೆ ಒಬ್ಬಿಬ್ಬರಿಗೆ ಕಾಯಿಲೆಯ ಅಂಜಿಕೆ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ಸಾಧಾರಣ ಇದ್ದವೆ. ಉದ್ಯೋಗದಲ್ಲಿ ಪ್ರಗತಿ ಸಾಧಾರಣವೆ, ಆದರೆ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ ಆದರೆ ಭವಿಷ್ಯಕಾಲದ ಬಗ್ಗೆ ಮನಸಿನಲ್ಲಿ ಗೂಢ ಚಿಂತೆ. ಮಿತ್ರತ್ವದಲ್ಲಿ ಸ್ವಲ್ಪ ವಿರೋಧ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಹಾನಿ. ಆದರೆ ಶತ್ರುಗಳಲ್ಲಿ ಒಡಕು ಬೀಳುವ ಯೋಗ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ, ಅಶ್ವಿನಿಯ ಕೊನೆಯ ೨ ಮತ್ತು ಭರಣಿಯ ಮೊದಲನೆ ೨ ಚರಣಗಳಿಗೆ ತೊಂದರೆ ಬಂದರೂ ಯಶಸ್ಸು. ತಾ. ೩, ೪, ೭ ಅನುಕೂಲ.

## ವೃಷಭ

ಪ್ರಕೃತಿ ಉತ್ತಮ ಸ್ತ್ರೀಸುಖ ಸ್ವಲ್ಪ ವಿರೋಧಯುಕ್ತ, ಆದರೆ ಉಳಿದ ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅತಿ ಉತ್ತಮ ದೊರಿತು ಪ್ರಿಯ ಜನರ ಸಹವಾಸದ ಸುಖವನ್ನನುಭೋಗಿಸಲು ಬರುವದು. ಮಿತ್ರ ಸುಖ ಬಹಳ ಉತ್ತಮ. ಉದ್ಯೋಗದಲ್ಲಿ ಒಳ್ಳೆ ಜೋರಾದ ಪ್ರಗತಿ. ತುಂಬ ಲಾಭ ಮತ್ತು ವಿರೋಧಿಗಳು ಮೂಗು ತಿಕ್ಕುವಂತೆ ಉತ್ತಮ ಪ್ರತಿಷ್ಠೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ವಿಜಯ. ಮಕ್ಕಳಲ್ಲಿ ಮತ್ತು ಬಂಧುವರ್ಗದಲ್ಲಿ ಒಳ್ಳೆ ಉತ್ಕರ್ಷ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಕೃತ್ತಿಕೆಯ ಕೊನೆಯ ೩ ಮತ್ತು ರೋಹಿಣಿಯ ಮೊದಲನೆ ೨ ಚರಣಗಳಿಗೆ ಹೆಚ್ಚು ಅನುಕೂಲ. ತಾ. ೧, ೩, ೫, ೬ ಅನುಕೂಲ.

## ಮಿಥುನ

ಪ್ರಕೃತಿ ಮತ್ತು ಸ್ತ್ರೀಸುಖವೂ ಉತ್ತಮ. ಪ್ರಾಪಂಚಿಕ ಸುಖದಲ್ಲಿ ಕೆಲ ಒಳ್ಳೆ ಸಂಗತಿಗಳಾದರೆ ಕೆಲ ವ್ಯಗ್ರತೆಯ ಸಂಗತಿಗಳು. ಉದ್ಯೋಗದಲ್ಲಿ ಪ್ರಗತಿ ಸಾಧಾರಣವೆ. ಆದರೆ ಪ್ರತಿಷ್ಠ ಮತ್ತು ಲಾಭ ಉತ್ತಮ. ಮಿತ್ರ ಸುಖ ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳ ನೀರು ಇಳಿಯುವಂತೆ ಯಶಸ್ಸು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಆರಿದ್ರೆಯ ಕೊನೆಯ ಮತ್ತು ಪುನರ್ವಸುವಿನ ಮೊದಲನೆ ಚರಣಗಳಿಗೆ ತೊಂದರೆ ಕಡಮೆ. ತಾ. ೧, ೨, ೩, ೪ ಅನುಕೂಲ,

## ಕರ್ಕ

ಪ್ರಕೃತಿ ಸಾಧಾರಣವೆ. ಸ್ತ್ರೀಸುಖ ಅನುಕೂಲ ಆದರೆ ಮಕ್ಕಳು ಉಪದ್ರವದ ಕೃತ್ಯ ಮಾಡುವರು. ಉದ್ಯೋಗದಲ್ಲಿ ಉತ್ತಮ ಪ್ರಗತಿ. ಒಳ್ಳೆ ಪ್ರತಿಷ್ಠೆ ಮತ್ತು ತುಂಬ ಲಾಭ. ಆದರೆ ಹೆಚ್ಚಿನ ವೆಚ್ಚದ ಪ್ರಸಂಗ ಬಹಳ ಸರಕಾರಿಜನರಗೂಡತುರಸಿನ ಕೆಲ ಪ್ರಸಂಗಗಳು. ಮಿತ್ರರಲ್ಲಿ ಕೆಲ ಅನುಕೂಲ ಆದರೆ ಕೆಲ ಉದ್ವೇಗಕರ ಸಂಗತಿಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನಸ್ಥಿತಿ. ಪ್ರವಾಸಾದಿ ಕೆಲಸ ಬಹಳ ಹಿತದ್ದು. ಪುಷ್ಯದ ಕೊನೆಯ ೨ ಮತ್ತು ಆಶ್ಲೇಷದ ಮೊದಲಿನ ಎರಡು ಚರಣಗಳಿಗೆ ತೊಂದರೆ ಕಡಮೆ. ತಾ. ೩, ೪, ೫, ೬ ಅನುಕೂಲ.

## ಸಿಂಹ

ನಿಮ್ಮ ಪ್ರಕೃತಿ ಅನುಕೂಲ. ಆದರೆ ಹೆಂಡತಿಯದು ಕೆಡುವದು. ಅಲ್ಲದೆ ಉಭಯತರಲ್ಲಿ ತೀವ್ರ ಮತಭೇದ ಕುಟುಂಬದಲ್ಲಿ ಕೆಲ ಮಂಗಲ ಕಾರ್ಯಗಳು. ಉದ್ಯೋಗದಲ್ಲಿ ಪ್ರಗತಿ ಜೋರಿನದು ಮತ್ತು ಪ್ರತಿಷ್ಠೆ ಹಾಗು ಲಾಭ ಬಹಳ ಕಡಮೆ, ಆದರೆ ವೆಚ್ಚದ ಪ್ರಮಾಣ ಭಾರದ್ದು. ಮಿತ್ರತ್ವದಲ್ಲಿ ವಿರೋಧ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಹಿಮ್ಮೆಟ್ಟುವದು. ಮನಸ್ಸು ಯಾವಾಗಲೂ ಚಿಂತಾತುರ. ಭೆಟ್ಟಿ ಮತ್ತು ಪತ್ರವ್ಯವಹಾರಕ್ಕಿಂತ ಪ್ರವಾಸ ಅನುಕೂಲ. ಮಘಾದ ಕೊನೆಯ ೨ ಮತ್ತು ಪೂರ್ವಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೩, ೪, ೬ ಅನುಕೂಲ.

## ಕನ್ಯಾ

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮ, ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಬಹಳ ದಗದಗಿಯದು ಬಂಧುವರ್ಗದವರಿಗೆ ಕ್ಲೇಶ ಇಲ್ಲವೆ ಅವರಿಂದ ಸ್ವತಃಕ್ಕೆ ಬಹಳ ಉಪದ್ರವವಾಗುವಂಥ ವರ್ತನೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮವಿದ್ದಷ್ಟೆ ವೆಚ್ಚವೂ ವಿಪರೀತ. ಮಿತ್ರಸುಖ ಉತ್ತಮ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು ಇಲ್ಲವೆ ಅನುಕೂಲತೆ ಸಿಕ್ಕುವಂತಿದ್ದರೂ ಕೇವಲ ಸಂಶಯದಿಂದ ನಿರರ್ಥಕ ವೆಚ್ಚ. ಸಭಾಸ್ಥಾನದಲ್ಲಿ ಬಹುಮಾನ ಪ್ರವಾಸಾದಿ ಕೆಲಸ ಸುಖಕರ. ಉತ್ತರಾದ ಕೊನೆಯ ೨ ಮತ್ತು ಹಸ್ತಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧, ೨, ೫, ೬ ಅನುಕೂಲ.

## ತುಲಾ

ಪ್ರಕೃತಿ ಉತ್ತಮ. ಸ್ತ್ರೀಸುಖ ಅನುಕೂಲ ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ತೊಂದರೆಯದು. ಹೆಂಡತಿ ಮತ್ತು ಮಕ್ಕಳು ನಿಮ್ಮ ವರ್ತನದ ಉಪಹಾಸ ಇಲ್ಲವೆ ತಿರಸ್ಕಾರ ಮಾಡುವರು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಆದರೆ ವೆಚ್ಚವೂ ಬಹಳ. ಪ್ರತಿಯೊಂದು ಕೆಲಸದಲ್ಲಿ ಆಯುತ್ತ ವೇಳೆಗೆ ಸ್ವಲ್ಪಾದರೂ ಮನೋಭಂಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಆಯುತ್ತ ಸಮಯದಲ್ಲಿ ಚಮತ್ಕಾರಿಕ ಪ್ರಕಾರದ ಯೋಗಾಯೋಗದಿಂದ ಬಹಳ ಯಶಸ್ಸು. ಮಿತ್ರ ಸುಖ ಉತ್ತಮ. ಸಭೆಯಲ್ಲಿ ಇಲ್ಲವೆ ಸರಕಾರದಲ್ಲಿ ದೊಡ್ಡ ಬಹುಮಾನ. ಪ್ರವಾಸಾದಿ ಕೆಲಸ ಬಹಳ ಹಿತದ್ದು. ಸ್ವಾತಿಯ ಕೊನೆಯ ೨ ಮತ್ತು ವಿಶಾಖಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧, ೨, ೩, ೪ ಅನುಕೂಲ.

## ವೃಶ್ಚಿಕ

ಪ್ರಕೃತಿ ಉತ್ತಮ. ಪ್ರಾಪಂಚಿಕ ಸುಖವೂ ಹಿತಾವಹ. ಆದರೆ ಹೆಂಡತಿಗೂಡ ಕೆಲ ವಿಷಯಗಳಲ್ಲಿ ಒಂದೆರಡುಸಲ ದೊಡ್ಡ ವಾಗ್ಯುದ್ಧ ನಡೆವ ಸಂಭವ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಉತ್ತಮ. ಆದರೆ ಪ್ರತಿಷ್ಠೆ ಬಹಳ ಕಡಮೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು ಆದರೂ ಆ ಬಗ್ಗೆ ಜನರಲ್ಲಿ ಬಹಳ ತರ್ಕವಿತರ್ಕ. ಮಿತ್ರಸುಖ ಅನುಕೂಲ. ಸ್ಥಾವರದಲ್ಲಿ ಸ್ವಲ್ಪ ಹೆಚ್ಚಳ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಅನುರಾಧೆಯ ಕೊನೆಯ ೨ ಮತ್ತು ಜ್ಯೇಷ್ಠಾದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧, ೨, ೫, ೬ ಅನುಕೂಲ.

## ಧನು

ಪ್ರಕೃತಿ ಉತ್ತಮ. ಸ್ತ್ರೀಸುಖದಲ್ಲಿ ವಿರಸ ಮತ್ತು ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ದಗದಗಿ ಹೆಚ್ಚು. ಆದರೆ ಮಕ್ಕಳಲ್ಲಿ ಒಬ್ಬರ ಬಹಳ ಉನ್ನತಿ. ಉದ್ಯೋಗದಲ್ಲಿ ಪ್ರಗತಿ ಉತ್ತಮ ಆದರೆ ಪ್ರತಿಷ್ಠೆ ಮತ್ತು ಲಾಭ ಸಾಧಾರಣ ಅವಚಿತ ಲಾಭದ ಸ್ವಲ್ಪ ಸಂಭವ. ಸ್ವಪ್ನ ಭಾವೀಸೂಚಕ. ಮಿತ್ರಸುಖ ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಲಾಭ ಕಡಮೆ. ಆದರೆ ಶತ್ರುಗಳ ಮೇಲೆ ಒಳ್ಳೆ ವರ್ಚಸ್ಸು ಕೂಡುವಂಥ ಘಟನೆಗಳು ಪ್ರವಾಸ ಅನುಕೂಲ ಭೆಟ್ಟಿ ಮತ್ತು ಪತ್ರವ್ಯವಹಾರ ತೊಂದರೆಯವು. ಮೂಲಾದ ಕೊನೆಯ ೨ ಮತ್ತು ಪೂರ್ವಾಷಾಢಾದ ಮೊದಲನೆ ೨ ಚರಣಗಳಿಗೆ ತೊಂದರೆ ಹೆಚ್ಚು. ತಾ ೩, ೪, ೫, ೬ ಅನುಕೂಲ.

## ಮಕರ

ಪ್ರಕೃತಿಗೆ ಬಹಳ ಕ್ಲೇಶ. ಅವಾಂತರ ವಿಷಯಗಳಲ್ಲಿಯೂ ಪ್ರಾಪಂಚಿಕ ತೊಂದರೆ ಹೆಚ್ಚು. ಮಕ್ಕಳಲ್ಲಿ ಕ್ಲೇಶ ಇಲ್ಲವೆ ಅಪಕರ್ಷ. ಉದ್ಯೋಗದಲ್ಲಿ ಪ್ರಗತಿ ಹೆಚ್ಚು ಉತ್ತಮ ಪ್ರತಿಷ್ಠೆ ಆದರೆ ತುಂಬ ಲಾಭ ಅವಚಿತ ಲಾಭದ ಸಂಭವವೂ. ಮಿತ್ರತ್ವದಲ್ಲಿ ವಿರೋಧ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನಸ್ಥಿತಿ. ಪ್ರವಾಸಾದಿ ಕೆಲಸ ಒಟ್ಟಾರೆ ಅನುಕೂಲ. ಉತ್ತರಾಷಾಢಾದ ಕೊನೆಯ ೨ ಮತ್ತು ಶ್ರವಣದ ಮೊದಲನೆ ೨ ಚರಣಗಳಿಗೆ ತೊಂದರೆ ಹೆಚ್ಚು. ತಾ ೫, ೬, ೭ ಅನುಕೂಲ,

## ಕುಂಭ

ಪ್ರಕೃತಿಗೆ ಬಹಳ ಕ್ಲೇಶ. ಸ್ತ್ರೀಸುಖ ಅನುಕೂಲ ಆದರೆ ಉಳಿದ ವಿಷಯಗಳಲ್ಲಿ ಪರಸ್ಪರರಲ್ಲಿ ಬಹಳ ವಿರೋಧ. ಮಕ್ಕಳು ಅಪಮಾನ ಮಾಡುವದರಿಂದ ಮನಸ್ಸಿನಲ್ಲಿ ಬಹಳ ಖಿನ್ನತೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಸಾಧಾರಣವೆ. ಆದರೆ ಅಪರಿಹಾರ್ಯ ವೆಚ್ಚ ಬಹಳ. ಮಿತ್ರತ್ವದಲ್ಲಿ ವಿರೋಧ. ಸ್ವಪ್ನ ಬಹಳ ಭಾವೀಸೂಚಕ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಅನುಕೂಲ. ಶತತಾರಿಕೆಯ ಕೊನೆಯ ೨ ಮತ್ತು ಪೂರ್ವಾ ಭಾದ್ರಪದದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೩, ೪, ೭ ಅನುಕೂಲ.

## ಮೀನ

ಪ್ರಕೃತಿ ಉತ್ತಮ. ಸ್ತ್ರೀಸುಖ ಅನುಕೂಲ ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ಹೆಚ್ಚು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ ಆದರೆ ಪರಾವಲಂಬಿತನದಲ್ಲಿ ಬಹಳ ಹೆಚ್ಚಳ. ವಾದದಲ್ಲಿ ಒಳ್ಳೆ ಯಶಸ್ಸು ಮಿತ್ರಸುಖ ಅನುಕೂಲ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಉತ್ತರಾಭಾದ್ರಪದದ ಕೊನೆಯ ೨ ಮತ್ತು ರೇವತಿಯ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧, ೨, ೫, ೬ ಅನುಕೂಲ.

# ಈ ವಾರದ ಕತೆ

(೧೫ನೇ ಪುಟದಿಂದ)

ಇದು ಬರೀ ಸುಳ್ಳಿನ ಕತೆಯೆಂದು ವಾಚಕರಿಗೆ ಗೊತ್ತು. ಆದ್ದರಿಂದ ಅರವಿಂದನಿಗೆ ನಾನು ಎರಡು ಅಪರಾಧ ಮಾಡಿದ್ದೇನೆ. ನಾನು ಅವನಿಗೆ ಮೋಸ ಮಾಡಿದ್ದೇನೆ. ಮತ್ತು ನಾನು ಮಾಡಿದ ಮೋಸವನ್ನು ಮುಚ್ಚಿಗೊಳ್ಳಲಿಕ್ಕೆ ಅವನಿಗೊಂದು ಸುಳ್ಳು ಹೇಳಿದ್ದೇನೆ.

ಎರಡನೇದ್ದೆಂದರೆ ಮಸಣದಲ್ಲಿ "ನಾವೆಲ್ಲರೂ ಮಣ್ಣು. ಇಂದಿಲ್ಲ ನಾಳೆ ಮಣ್ಣಾಗಿ ಹೋಗುವವರು" ಎಂದು ಸಾರಿ ಹೇಳುತ್ತಿರುವ ದಹನಭೂಮಿಯಲ್ಲಿ ಮೋಸ, ಕಳ್ಳತನ ಮುಂತಾದ ಎಲ್ಲ ದುರ್ಗುಣಗಳನ್ನು ಹೂತಿಟ್ಟು ಒಬ್ಬರೊಬ್ಬರನ್ನು ಮಮತೆಯಿಂದ ನೋಡುವ ಸ್ಥಳದಲ್ಲಿ ದೊರಕಿದ ಚೌಕುಳಿಗಳನ್ನು ಹೀಗೆ ನಾನು ಗಿಟ್ಟಿಸಿಗೊಳ್ಳುವದೆಂದರೆ ಏನು ? ಕಾಡು ಬಾಳಿನಲ್ಲಿಯೂ ಈ ರೀತಿಯಿಲ್ಲದ ಮಾನವ್ಯದ ಮೇರೆಯನ್ನು ಮೀರಿದ ಈ ನನ್ನ ಕೃತಿಗೆ ಪ್ರಾಯಶ್ಚಿತ್ತವೇನು ?

ಮೂರನೆಯದೆಂದರೆ ನನ್ನ ಹೆಂಡತಿಯ ವಿಷಯ ಅವಳಿಗಿನ್ನೂ ಈ ವಿಷಯ ಹೇಳಿಲ್ಲ. ಹೇಳಿದರೆ ನನ್ನ ಪರಿಸ್ಥಿತಿಯನ್ನು ಹೇಳಲಾಸಲ್ಲ. ಆದ್ದರಿಂದ ಇದುವರೆಗೆ ಅವಳಿಗೆ ಮಾಡಿದ ಮೋಸ.

ಈ ಮೂರು ಕಾರಣಗಳು ನಾನು ಅಪರಾಧಿಯಿದ್ದೇನೆಂದು ಸಾರಿ ಹೇಳುತ್ತಿವೆ.

"ಈಗಿನ ನಿನ್ನ ಪರಿಸ್ಥಿತಿ ಸುಧಾರಿಸಿದೆಯೆಂದು ನೀನು ಹೇಳುತ್ತಿ. ಅದಕ್ಕೆ ಆ ಚೌಕುಳಿಗಳ ಬೆಲೆಯನ್ನು ಅರವಿಂದನಿಗೆ ಕೊಟ್ಟರಾಯಿತು. ಅಂದರೆ ನಿನ್ನ ಅಪರಾಧ ತೀರುತ್ತಿದೆ'' ಎಂದು ನೀವು ಹೇಳಬಹುದು. ಆದರೆ ವಿಚಾರ ಮಾಡಿ ನೋಡಿದರೆ ನಿಮ್ಮ ಹೇಳಿಕೆಯು ತೀರ ವಿಚಿತ್ರವಿದೆಯೆಂದು ನನ್ನ ಅಭಿಪ್ರಾಯ. ಈಗ ಅರವಿಂದನನ್ನು ಯಾವ ಮೋರೆಯಿಂದ ನೋಡಲಿ ? ಯಾವ ಬಾಯಿಯಿಂದ ಮಾತನಾಡಿಸಲಿ ? ಅದರ ಬೆಲೆ ಅವನಿಗೆ ತಿರುಗಿ ಕೊಡಲಿಕ್ಕೆ ಅದನ್ನೇನು ಅವನು ನನಗೆ ಮಾರಾಟ ಮಾಡಿದ್ದನೇ ? ನಾನು ಕೊಟ್ಟ ಹಣವನ್ನು ಅವನು ತಿರುಗಿ ತೆಗೆದುಕೊಳ್ಳುವನೇ ? ಅದೂ ಇರಲಿ, ನಾನು ಚೌಕುಳಿಗಳನ್ನು ಗಿಟ್ಟಿಸಿಕೊಂಡಾಗ್ಗೆ ಅವುಗಳನ್ನು ಅರವಿಂದನಿಗೆ ತಿರುಗಿ ಕೊಡಲೇ ಬಾರದೆಂದು ನಿರ್ಧಾರ ಮಾಡಿದ್ದೆ. ಅಲ್ಲದೆ ಅದನ್ನು ಕೃತಿಯಲ್ಲಿ ಕೂಡ ತಂದಿದ್ದೇನೆ. ನಮ್ಮ ಕುವಿಚಾರಗಳಿಗೆ ಕೂಡ ಪಾಪವಿರುವಾಗ ಕುಕರ್ಮಗಳು ಅಪರಾಧಗಳಾಗಲಿಕ್ಕಿಲ್ಲವೇ ?

ಈ ಕೆಲಸ ಮಾಡಲಿಕ್ಕೆ ನೀವು ಒಂದು ಕಾರಣ ತೋರಿಸಿಕೊಡಬಹುದು. ಅದೆಂದರೆ ನನ್ನ ಪರಿಸ್ಥಿತಿ. ನನ್ನ ಬಡತನ ಆದರೆ ನನಗೆ ಬಡತನವಿದ್ದರೆ ಇನ್ನಿತರರ ಸ್ವತ್ತನ್ನು ಅಪಹರಿಸಲಿಕ್ಕೆ ನನಗೇನು ಅಧಿಕಾರ ?

ಅಂತೂ ಈ ದೃಷ್ಟಿಯಿಂದಲೂ ನಾನು ಅಪರಾಧಿಯಾಗಿದ್ದೇನೆ. ಒಟ್ಟಿನ ಮೇಲೆ ಯಾವ ಕಾರಣಗಳೂ ನನ್ನನ್ನು ಎತ್ತಿ ಹಿಡಿಯಲಾರವು. ಎಲ್ಲವೂ ನನ್ನನ್ನು ಅಪರಾಧಿಯೆಂದು ಬೆರಳು ಮಾಡಿ ತೋರಿಸುತ್ತವೆ.

ಮಹನೀಯರೇ, ಇಲ್ಲಿಗೆ ನನ್ನ ಹೇಳಿಕೆ ಮುಗಿಯಿತು. ನಾನು ಅಪರಾಧಿಯೆಂದು ಬಿಚ್ಚು ಮನಸ್ಸಿನಿಂದ ಒಪ್ಪಿಗೊಂಡಿದ್ದೇನೆ. ಆದರೆ ನಾನು ಮಾಡಿದುದು ಅಪರಾಧವೋ ಅಲ್ಲ...... ಇದೇ ಈಗ ನಾನೇನು ಬರೆದೆ, ನಾನು ಮಾಡಿದುದು ಅಪರಾಧವೋ ಅಲ್ಲವೋ ಎಂದಲ್ಲವೇ ? ಅದು ತೀರ ತಪ್ಪು. ನಾನು ಅಪರಾಧ ಮಾಡಿದ್ದೇನೆ. ನೀವೂ ನಾನು ಅಪರಾಧಿಯೆಂದು ಬಗೆದೀರೆಂದು ನಂಬಿದ-

ನಿಮ್ಮ ಅಪರಾಧಿ



ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಪೋಹರೆಯವರಿಂದ ಮುದ್ರಿತ, ಪ್ರಕಟವಾಯಿತು